


# ತಿರುಮಲೆ ತಿರುಪತಿ ದೇವಸ್ಥಾನಗಳು

# ಶ್ರೀವಾರಿ ಸೇವೆ



## ಭಕ್ತರಿಗೆ ಸ್ವಚ್ಛಂದ ಸೇವಾವಕಾಶ

ಶ್ರೀ ವೆಂಕಟೇಶ್ವರ ಸ್ವಾಮಿಯು ನೆಲೆಸಿರುವ ಪವಿತ್ರವಾದ ತಿರುಮಲೆಗೆ ವರ್ಷಂಪ್ರತಿ ಲಕ್ಷಾಂತರ ಮಂದಿ ಭಕ್ತರು ಬಂದು ಹೋಗುತ್ತಾರೆ. ದೇಶದ ನಾನಾ ಭಾಗಗಳಿಂದ ಬರುವ ಈ ಯಾತ್ರಿಕರ ಸೇವೆಯಲ್ಲಿ ಮತ್ತೂ ಹೆಚ್ಚಿನ ಅನುಕೂಲಗಳನ್ನುಂಟುಮಾಡಲೆಂದು ತಿರುಮಲ ತಿರುಪತಿ ದೇವಸ್ಥಾನಗಳು "ಶ್ರೀವಾರಿ ಸೇವೆ"ಯನ್ನು ಆರಂಭಿಸಿದೆ.

ಸೇವಾ ಮನೋಭಾವವನ್ನು ಹೆಚ್ಚಿಸಿ, ಸೌಹಾರ್ದತೆಯನ್ನು ಬೆಳೆಸಿ ಭಕ್ತಿಭಾವವನ್ನು ಸರ್ವತ್ರ ಹರಡುವಂತಹ ಒಂದು ವಿಶಿಷ್ಟವಾದ ಅವಕಾಶವನ್ನು ಈ ಸೇವೆಯು ಒದಗಿಸುತ್ತದೆ. ಶ್ರುತಿ ಸ್ಮೃತಿಗಳು ಹೇಳುವಂತೆ ಗರ್ಭಗೃಹದಲ್ಲಿರುವ ಸ್ವಾಮಿಯನ್ನು ಆರಾಧಿಸುವುದರ ಮೂಲಕವಾಗಿ ಮಾತ್ರವೇ ಅಲ್ಲದೆ, ಆತನ ಭಕ್ತರ ಸೇವೆಯನ್ನು ಮಾಡುವುದರಿಂದಲೂ ದೈವಾನುಗ್ರಹವನ್ನು ಪಡೆಯಬಹುದು. ಹೀಗಾಗಿ "ಶ್ರೀವಾರಿ ಸೇವೆ"ಯು ಸ್ವಾಮಿಯ ಭಕ್ತರನ್ನು ನಿಸ್ವಾರ್ಥದಿಂದ ಸೇವಿಸುವುದರ ಮೂಲಕ ಶ್ರೀನಿವಾಸ ದೇವರ ಸೇವೆ ಮಾಡಿ ಅಧಿಕ ಫಲ ಪಡೆಯುವಂತೆ ಮಾಡುವುದು.

ಭಕ್ತರು ತಮ್ಮ ಸ್ವಯಂಸೇವೆಯನ್ನು ಕೆಳಕಂಡ ಕ್ಷೇತ್ರಗಳಲ್ಲಿ ಮಾಡಬಹುದಾಗಿದೆ-

1. ಅನ್ನದಾನ ಯೋಜನೆ, 2. ಸರತಿಯ ಸಾಲು, 3. ಕಲ್ಯಾಣಕಟ್ಟೆ, 4. ಕಾಲುಹಾದಿಯ ಯಾತ್ರಿಕರಿಗೆ ನೆರವು ನೀಡುವಿಕೆ, 5. ಸಾಮಾನುಗಳನ್ನು ಭದ್ರಗೊಳಿಸುವ ಕೋಣೆ, 6. ವಾಹನ ನಿಲ್ದಾಣ, 7. ಉಚಿತ ವಸ್ತುಸಾಗಣೆ ಕೇಂದ್ರ, 8. ಸ್ವಾಮಿ ಪುಷ್ಕರಿಣಿ 9. ಸಮಾಚಾರ ಕೇಂದ್ರ, 10. ಶ್ರೀವಾರಿ ಆಲಯ.

ಯಾತ್ರಿಕರು ತಮ್ಮ ಅಪೇಕ್ಷೆ, ಆಸಕ್ತಿಗಳಿಗೆ ತಕ್ಕಂತೆ ಸೇವಾ ಕ್ಷೇತ್ರವನ್ನು ಆಯ್ಕೆ ಮಾಡಿಕೊಳ್ಳಬಹುದು. ಅನ್ನದಾನಂ ಭವನದಲ್ಲಿ ಕೆಲಸ ಮಾಡುತ್ತಿರುವ ಕೌಂಟರಿನಲ್ಲಿ ತಮ್ಮ ಹೆಸರನ್ನು ಕೂಡಲೇ ನೊಂದಾವಣೆ ಮಾಡಿಕೊಳ್ಳಬಹುದು. ಹತ್ತು ಮಂದಿಗೆ ಕಡಿಮೆಯಿಲ್ಲದಂತೆ ಒಂದು ಗುಂಪಿನಲ್ಲಿ ಒಂದು ವಾರಕ್ಕೆ ಕಡಿಮೆಯಾಗದಂತೆ ಸೇವೆ ಸಲ್ಲಿಸಬಯಸುವವರು ಮೊದಲೇ ತಿಳಿಸಿ ಸೇವೆಯಲ್ಲಿ ಭಾಗವಹಿಸಬಹುದು. ಇವರಿಗೆ ಉಚಿತ ವಸತಿ ಹಾಗೂ ಭೋಜನ ಸೌಕರ್ಯವನ್ನು ತಿರುಮಲೆಯಲ್ಲಿ ಒದಗಿಸಲಾಗುವುದು. ಭಜನ ಸಂಘಗಳೂ ಸ್ಫೂರ್ತಿದಾಯಕವಾದ ಈ ಸೇವೆಯಲ್ಲಿ ಭಾಗವಹಿಸಬಹುದು.

"ಶ್ರೀವಾರಿಸೇವೆ"ಯಲ್ಲಿ ಪಾಲು ಹಂಚಿಕೊಳ್ಳಬಯಸುವ ಯಾತ್ರಿಕ ಭಕ್ತರು ತಿರುಮಲೆಯ ಅನ್ನದಾನಂ ಸಮುದಾಯ ಭವನದಲ್ಲಿರುವ ಶ್ರೀವಾರಿ ಸೇವೆ ವಿಭಾಗದಲ್ಲಿ ತಮ್ಮ ಹೆಸರನ್ನು ನಮೂದಿಸಿಕೊಳ್ಳಬೇಕೆಂದು ಕೋರಲಾಗಿದೆ.

ಹೆಚ್ಚಿನ ವಿವರಗಳಿಗೆ : ಶ್ರೀವಾರಿಸೇವೆ ವಿಭಾಗ ಅನ್ನದಾನಂ ಕಾಂಪ್ಲೆಕ್ಸ್ - ತಿರುಮಲ, **ದೂರವಾಣಿ - 08574 - 79693.**

**ಪೌರಸಂಬಂಧಾಧಿಕಾರಿಗಳು,** ತಿ. ತಿ. ದೇವಸ್ಥಾನಗಳು - ತಿರುಪತಿ. **ದೂರವಾಣಿ - 08574 - 32813.**

**ಕಾರ್ಯನಿರ್ವಹಣಾಧಿಕಾರಿ.**







ಚಿತ್ತಜನಯ್ಯನ ಚಿಂತಿಸು ಮನವೆ ॥ ಪ ॥

ಹೊತ್ತು ಕಳೆಯದೆ ಪುರುಷೋತ್ತಮನ ನೆನೆ ಮನವೆ ॥ ಅ.ಪ. ॥

ಕಾಲನ ದೂತರು ನೂಲು ಹಗ್ಗವ ತಂದು
ಕಾಲು ಕೈಗಳ ಕಟ್ಟಿ ಮೇಲೆ ಕುಟ್ಟಿ
ಕಾಲಪಾಶದಿ ಸುತ್ತಿ ಶೂಲದಿಂದಿರಿವಾಗ
ಪಾಲಿಸುವ ವರುಂಟೆ ಚಾಲವ ಮಾಡದೆ ॥ 1 ॥

ದಂಡಧರನ ಭಟರು ಚಂಡಕೋಪದಿ ಬಂದು
ಕೆಂಡದ ನದಿಯ ತಡಿಗೆ ಕೊಂಡೊಯ್ದು
ಖಂಡ ಖಂಡವ ಕಿತ್ತು ಕೆಂಡದೊಳಿಡುವಾಗ
ಹೆಂಡರು ಮಕ್ಕಳು ಬಂದು ಬಂಡಾಯ ಬಿಡಿಸುವರೆ ॥ 2 ॥

ಅಂಗುಲಿಗೆ ದಬ್ಬಣಂಗಳ ಚುಚ್ಚಿ ಎರಡು
ಕಂಗಳಿಗೆ ಸೀಸವ ಕಾಸಿ ಹುಯ್ಯಲು
ತಂಗಿ ಅಕ್ಕ ಬಂದು ಭಂಗವ ಬಿಡಿಸುವರೆ
ಅಂಗವು ಸ್ಥಿರವಲ್ಲ ರಂಗವಿಠಲ ಬಲ್ಲ ॥ 3 ॥

- ಶ್ರೀಪಾದರಾಜರು.





ಸಂದರ್ಶಿಸಿ ಆನಂದಿಸಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ತಿರುಮಲೆ



# ವಾರ್ಷಿಕ ಪವಿತ್ರೋತ್ಸವ

## 29-7-2001 ರಿಂದ 1-8-2001 ವರೆಗೆ

| | | |
|---|---|---|
| 29-7-2001 | ಭಾನುವಾರ | ಅಂಕುರಾರ್ಪಣೆ. |
| 30-7-2001 | ಸೋಮವಾರ | ಪವಿತ್ರ ಪ್ರತಿಷ್ಠೆ. |
| 31-7-2001 | ಮಂಗಳವಾರ | ಪವಿತ್ರ ಸಮರ್ಪಣೆ. |
| 1-8-2001 | ಬುಧವಾರ | ಪೂರ್ಣಾಹುತಿ. |

ಸೂಚನೆ : ಶ್ರಾವಣಮಾಸದ ಈ ಕಾರ್ಯಕ್ರಮದಲ್ಲಿ ಆರ್ಜಿತ ಸೇವಾಶುಲ್ಕ ನೀಡಿ ಗೃಹಸ್ಥರು ಪಾಲುಗೊಳ್ಳಬಹುದು. ವಿವರಗಳಿಗಾಗಿ ಬಳಿಯಲ್ಲಿನ ತಿ.ತಿ.ದೇ. ವಿಚಾರಣಾ ಕೇಂದ್ರದಲ್ಲಿ ವಿಚಾರಿಸಿ.

ತಾವೂ ಬನ್ನಿ. ತಿ.ತಿ.ದೇ. ತಮ್ಮವರನ್ನೂ ಕರೆತನ್ನಿ.





ಗೌರವ ಸಂಪಾದಕರು :
**ಡಾ|| ಪಿ. ಕೃಷ್ಣಯ್ಯ**, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ. ತಿರುಪತಿ.

ಸಂಪಾದಕ :
**ಡಾ|| ಎನ್.ಎಸ್. ರಾಮಮೂರ್ತಿ**,

ಮುದ್ರಣ :
**ಐ. ಪಾರ್ವತೀಶ್ವರ ರಾವ್**,
ಬಿ.ಎ.,ಎಲ್.ಪಿ..ಟಿ.,
ಮ್ಯಾನೇಜರ್,
ತಿ.ತಿ.ದೇ. ಮುದ್ರಣಾಲಯ, ತಿರುಪತಿ.

ಉಪಸಂಪಾದಕ :
**ಬಿ. ಎನ್. ಶ್ರೀನಿವಾಸನ್**, ಎಂ.ಎ.

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ-
ಸಂಪಾದಕರು
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ
ಪ್ರತಿಗಳೂ
ಎಲ್ಲ ತಿ.ತಿ.ದೇ.
ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ 4-00**
**ವಾರ್ಷಿಕ ಚಂದಾ 48-00**




ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ
ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ


ಸಂಪುಟ - 32 ಜುಲೈ 2001 ಸಂಚಿಕೆ - 2


## ವಿಷಯಸೂಚಿ



ಮುಖಚಿತ್ರ : **ತಿರುಮಲೆಯ ಶ್ರೀ ಮಲೆಯಪ್ಪಸ್ವಾಮಿ.**
ಹಿಂಬದಿಯಲ್ಲಿ : **ಶ್ರೀ ಗೋವಿಂದರಾಜಸ್ವಾಮಿ ಕಾಲೇಜು.**

# ನಿಮ್ಮೊಡನೆ.......



ಸತ್ಯವತೀ ಪರಾಶರ ಪುತ್ರನನ್ನು ಕೃಷ್ಣದ್ವೈಪಾಯನ ವ್ಯಾಸರೆಂದು ಕರೆದರು. ಜನಿಸಿದಾಕ್ಷಣ ಜನನಿಯನ್ನು ತೊರೆದು ಜ್ಞಾನವನ್ನರಸಿ ಹೊರಟ ಮಹಾಪುರುಷ ಆತ. ಹಾಗಾಗಿ ಆತನಿಗೆ ಜನ್ಮನಾಮವಿಲ್ಲ. ಎಲ್ಲವೂ ಅನ್ವರ್ಥ ನಾಮಗಳೇ. ಶ್ಯಾಮಲ ವರ್ಣದವನಾಗಿ ಕೃಷ್ಣ. ದ್ವೀಪದಲ್ಲಿ ಹುಟ್ಟಿ ಬೆಳೆದವನಾಗಿ ದ್ವೈಪಾಯನ, ಬದರಿಯಲ್ಲಿ ನೆಲೆನಿಂತವನಾಗಿ ಬಾದರಾಯಣ. ವೇದಗಳನ್ನು ವ್ಯವಸ್ಥಿತವಾಗಿ ವಿಭಾಗಿಸಿದವನಾದ ಕಾರಣ ವೇದವ್ಯಾಸ.

ವ್ಯಾಸರನ್ನು ವಿಷ್ಣುರೂಪವೆಂದೂ ಕರೆದರು. ಕಾರಣ ಆತ ಧರ್ಮವೆಂದರೆ ಏನು ಎಂಬುದನ್ನು ತಿಳಿಸಿಕೊಟ್ಟರು. ಮಹಾಭಾರತದ ಇತಿಹಾಸವನ್ನು ಕಟ್ಟಿಕೊಟ್ಟರು. ಅಲ್ಲಿ ಆತ ಅನುಕ್ಷಣವು ವಿವರಿಸಿದ್ದು ಧರ್ಮವನ್ನು, ದೇವರು ನೀಡಿದ ಗೀತೆಯನ್ನು ಹಾಗೆಯೇ ದಾಖಲುಗೊಳಿಸುವುದರೊಡನೆ ಅದಕ್ಕೆ ಇಡೀ ಭಾರತವನ್ನು ದೃಷ್ಟಾಂತವಾಗಿ, ಉದಾಹರಣೆಯಾಗಿ ನೀಡಿ ಧರ್ಮವನ್ನು ಅದರ ಎಲ್ಲ ಕೋನಗಳಲ್ಲಿಯೂ ಕಾಣುವಂತೆ ವಿವರಿಸಿದರು. ಹಾಗಾಗಿಯೇ ಆತನನ್ನು ಪರಮಗುರುವೆಂದೂ ಕರೆದರು. ಆತ ಹೇಳಿದ್ದನ್ನೇ ಮಿಕ್ಕವರೆಲ್ಲ ಹೇಳಿದರೆಂಬುದರಿಂದಲೇ 'ವ್ಯಾಸೋಚ್ಛಿಷ್ಟಂ ಜಗತ್ಸರ್ವಂ' ಎಂದರು. ಆತ ಹೇಳಿದ ಭಾರತದಲ್ಲಿ ಎಲ್ಲವೂ ಇದೆ ಎಂದೂ ಅಲ್ಲಿ ಇಲ್ಲದ್ದು ಬೇರೆಲ್ಲೂ ಇಲ್ಲವೆಂದೂ ಹೇಳಿದರು. ಒಂದು ರೀತಿಯಲ್ಲಿ ಆದಿಪಂಚಕ ಇಡೀ ಜಗತ್ತಿನ ವರ್ಣನೆಯಾಗಿ, ಯುದ್ಧ ಪಂಚಕ ಮನುಷ್ಯನ ಅಂತರಂಗ ಪ್ರಪಂಚವಾಗಿ - ಮಾನಸ ಕುರುಕ್ಷೇತ್ರವಾಗಿ - ಅಲ್ಲಿ ಇಲ್ಲದ್ದು ಬೇರೆಲ್ಲೂ ಇಲ್ಲವೆಂದರೂ ನಡೆದೀತು. ಮಿಕ್ಕ ಎಂಟು ಪರ್ವ ಈ ಎಲ್ಲದರ ತಾತ್ವಿಕ ವಿವರಣೆ ಮಾತ್ರವೇ.

ಪುರಾಣಗಳನ್ನು - ಅವು ಹದಿನೆಂಟು ಎಂದು ಹೇಳಲಾಗುತ್ತದೆ. (ಉಪಪುರಾಣಗಳುಂಟಾದರೂ) ಅವುಗಳನ್ನೂ ರಚಿಸಿದವರು ವೇದವ್ಯಾಸರೆಂದೇ ಪ್ರಸಿದ್ಧ. ಅಲ್ಲಿ ಇಡೀ ಜಗತ್ತಿನ ಸೂಕ್ಷ್ಮ ಸ್ಥೂಲಗಳೆಲ್ಲ ಲಘುಗುರು ಪ್ರಸ್ತಾರವಾಗಿವೆ. ವೇದಗಳಿಗಿಂತ ಮೊದಲು ಪುರಾಣಗಳೆಂದರೂ, ಎರಡೂ ಬಗೆಯ ಸಾಹಿತ್ಯ ಸಂಪಾದಕರೂ ವೇದವ್ಯಾಸರೇ ಎಂಬುದರಿಂದಾಗಿ ಒಟ್ಟು ಸನಾತನ ಧರ್ಮಧ್ವನಿಗೆ - ವೇದವ್ಯಾಸರ ಗುರುತ್ವಕ್ಕೆ - ಆ ಮಹಾಚೇತನದ ಗರಿಮೆಗೆ - ಯಾವುದೇ ಕೊರತೆಯುಂಟಾಗದು.

ವೇದಗಳನ್ನು ವ್ಯವಸ್ಥಿತವಾಗಿ ವಿಂಗಡಿಸಿ ನಾಲ್ಕು ಜನ ಶಿಷ್ಯರಿಗೆ ನಾಲ್ಕು ವೇದಗಳನ್ನು ಅನುಗ್ರಹಿಸಿ ಅವುಗಳ ಪ್ರಾಚುರ್ಯಕ್ಕೆ ಅನುವು ಮಾಡಿಕೊಟ್ಟು ಧರ್ಮವನ್ನು ಧರೆಯಲ್ಲಿ ಹರಡುವಂತೆ ಮಾಡಿದ್ದೇ ಅಲ್ಲದೆ, ವೇದಗಳ ಸಾರವನ್ನು ಅತ್ಯಂತ ಕಿರಿದಾದ ವಾಕ್ಯಗಳಲ್ಲಿ ತಿಳಿಸಿಕೊಟ್ಟು ಸೂತ್ರೀಕರಿಸಿದರು. ಅವುಗಳನ್ನ ಬ್ರಹ್ಮಸೂತ್ರಗಳು ಎಂದು ಮುಂದಿನವರು ಕರೆದು ವ್ಯಾಖ್ಯಾನಗಳನ್ನ, ಅರ್ಥ ವಿವರಣೆಗಳನ್ನ, ತಾತ್ಪರ್ಯ ಸಾರಗಳನ್ನ ನೀಡುತ್ತ ಆಯಾಕಾಲಕ್ಕೆ ತಕ್ಕಂತೆ ಅರ್ಥೈಸತೊಡಗಿದರು. ಹಾಗಾಗಿ ವೇದಾಂತದ ಉಪನಿಷತ್ತುಗಳು, ಭಾರತದ ಭಗವದ್ಗೀತೆ, ಬ್ರಹ್ಮಪದಾರ್ಥವಿವರದ ಬ್ರಹ್ಮಸೂತ್ರಗಳು ಸೇರಿದ ಪ್ರಸ್ಥಾನತ್ರಯಕ್ಕೆ ಪ್ರಧಾನ ಸಂಪಾದಕರಾದರು.

ಪುರಂದರ ದಾಸರು ಹೇಳಿದರು - ಗುರುವಿನ ಗುಲಾಮನಾಗದನಕ ದೊರೆಯದಣ್ಣ ಮುಕುತಿ. ಮನುಷ್ಯ ಎಷ್ಟೇ ವಿವರಗಳನ್ನು ಗ್ರಹಿಸುವವನಾಗಿರಬಹುದು. ಪ್ರಯತ್ನ ಎಷ್ಟೇ ಘನವಾಗಿಯೂ ಇರಬಹುದು. ಆದರೂ ಗುರು ಕರುಣೆಯ ಕಟಾಕ್ಷವಿಲ್ಲದೆ ಸಿದ್ಧವಾಗುವುದು ಸ್ವಲ್ಪವೇ. ಸಂಪೂರ್ಣ ಜ್ಞಾನ ಸ್ವಾನುಭವವಾಗಲು ಗುರುರಾಯನ ದಯೆಯಿರಬೇಕು - ಎಂಬುದೇ ತಾತ್ಪರ್ಯವಾಗುತ್ತದೆ.

ಇಂತಲ್ಲಿ ಗುರುಪೂರ್ಣಿಮೆಯ ಹಬ್ಬ ಒದಗಿ ಬರುತ್ತದೆ; ನಮ್ಮ ಲಘಿಮೆಯನ್ನು ತೊರೆದು ಗುರುಗಮ್ಯದತ್ತ ನಡೆಯಲು ಒಂದು ಅವಕಾಶ - ಉತ್ತರೋತ್ತರ ಉದ್ಧಾರವಾಗಲು ಒಂದು ಅವಕಾಶ - ಎಂದರೆ ಏಕೆ ಎರಡೂ ಕೈಗಳನ್ನು ಚಾಚಿ ಹಿಡಿಯಬಾರದು. ಆಶ್ರಯಕ್ಕೆ ಇವೆ - ಭಾರತ, ಭಾಗವತ, ಬ್ರಹ್ಮಸೂತ್ರ. ಯಾವೊಂದನ್ನು ಮನನ ಮಾಡಿದರೂ ಆಯಿತು. ಒಂದು ಪುಸ್ತಕವೆ ಸಾಕು - ಪುರುಷಾರ್ಥ ಸಾಧನೆಗೆ.

ನಮೋಸ್ತುತೇ ವ್ಯಾಸ ವಿಶಾಲಬುದ್ಧೇ ಫುಲ್ಲಾರವಿಂದಾಯತ ಪತ್ರ ನೇತ್ರ
ಯೇನ ತ್ವಯಾ ಭಾರತ ತೈಲಪೂರ್ಣಃ ಪ್ರಜ್ವಾಲಿತೋ ಜ್ಞಾನಮಯ ಪ್ರದೀಪಃ

**ಡಾ|| ಪಿ. ಕೃಷ್ಣಯ್ಯ.**
ಕಾರ್ಯನಿರ್ವಹಣಾಧಿಕಾರಿ.
ತಿ.ತಿ.ದೇ.

# ಶ್ರೀಪಾದರಾಯರು

- ಎಂ. ಎ. ಸಿಂಗಮ್ಮ.

ಶ್ರೀಪಾದರಾಯರೆಂಬುವರು ವಿಭವ ಮೂರ್ತಿಗಳೆಂಬ ಭಾವನೆಯು ಜನರಲ್ಲಿದ್ದುದರಿಂದ ಅವರ ಸ್ಮರಣೆಯ ಮಾತ್ರದಿಂದಲೇ ಮೃಷ್ಟಾನ್ನವು ದೊರಕುವುದೆಂಬ ಭಾವನೆಯು ಇಂದಿಗೂ ಭಾವಿಕ ಜನರಲ್ಲಿ ನೆಲೆಗೊಂಡಿದೆ. ಅವರು ಹರಿದಾಸರ ಕಥನವನ್ನು ಮಾಡುವುದಕ್ಕೆ ಮೊದಲು ''ಶ್ರೀಪಾದರಾಜಾಯ ನಮಃ'' ಎಂಬ ಪುಣ್ಯನಾಮವನ್ನು ಸ್ಮರಿಸುತ್ತಾರೆ. ಚನ್ನಪಟ್ಟಣದ ಹತ್ತಿರದಲ್ಲಿದ್ದ ಅಬ್ಬೂರೆಂಬ ಗ್ರಾಮದಲ್ಲಿ ವ್ಯವಸಾಯವನ್ನು ಮಾಡಿಕೊಂಡು ಜೀವನವನ್ನು ನಡೆಸುತ್ತಿದ್ದ ಶೇಷಗಿರಿ ಆಚಾರ್ಯ ಮತ್ತು ಗಿರಿಯಮ್ಮ ಎಂಬ ಬಡ ದಂಪತಿಗಳಿಗೆ ಒಬ್ಬ ಕುಮಾರನು ಜನಿಸಿದನು. ಅವನಿಗೆ ಅವರು ಲಕ್ಷ್ಮೀನಾರಾಯಣನೆಂಬ ನಾಮಕರಣವನ್ನು ಮಾಡಿದರು. ಶೇಷಗಿರಿ ಆಚಾರ್ಯರು ತಾವು ಶಾಸ್ತ್ರಗಳನ್ನು ವ್ಯಾಸಂಗಮಾಡಿದ ಪಂಡಿತರಾಗಿರಲಿಲ್ಲವಾದರೂ ಮಗನಿಗೆ ಅವನು ದೊಡ್ಡವನಾದ ಮೇಲೆ ಅಕ್ಷರಾಭ್ಯಾಸ ಮಾಡಿ ಸ್ವಲ್ಪ ವಿದ್ಯಾಭ್ಯಾಸವನ್ನು ಮಾಡಿಸಿದರು. ಲಕ್ಷ್ಮೀನಾರಾಯಣನು ತನ್ನ ಮಾತಾಪಿತೃಗಳಿಗೆ ಮನೆಯ ಕೆಲಸದಲ್ಲಿ ನೆರವಾಗಿ ಒಕ್ಕಲಿಗರ ಮಕ್ಕಳೊಂದಿಗೆ ಗುಡ್ಡದ ಬಳಿಗೆ ಹೋಗಿ ಹಸುಗಳನ್ನು ಮೇಯಿಸಿಕೊಂಡು ಕಾಲವನ್ನು ಕಳೆಯುತ್ತಿದ್ದನು. ಇವನು ತೇಜೋವಂತನಾದ ಬ್ರಾಹ್ಮಣ ಬಾಲಕನಾಗಿ ಇದ್ದುದರಿಂದ ಆ ಒಕ್ಕಲಿಗರ ಮಕ್ಕಳಿಗೆಲ್ಲಾ ಇವನೇ ಪ್ರಮುಖನಾಗಿದ್ದನು.

ಹೀಗಿರಲು ಒಮ್ಮೆ ಆ ಗುಡ್ಡಗಾಡಿನಲ್ಲಿ ಸ್ವರ್ಣವರ್ಣ ತೀರ್ಥರೆಂಬ ಸ್ವಾಮಿಗಳು ಮೇನೆಯಲ್ಲಿ ಸಂಚಾರವನ್ನು ಮಾಡಿಕೊಂಡು ಬರುತ್ತಿದ್ದರು. ಅವರ ಮೇನೆಯನ್ನು ಹೊರುತ್ತಿದ್ದ ಸೇವಕರು ಬಹಳ ವೇಗವಾಗಿ ಹೋಗುತ್ತಿದ್ದುದರಿಂದ ಅವರ ಶಿಷ್ಯರುಗಳು ಅವರನ್ನು ಹಿಂಬಾಲಿಸಲು ಆಗಲಿಲ್ಲ. ಆಸ್ತಮಾನ ಸಮಯವಾದರೂ ಅಬ್ಬೂರು ಸಿಕ್ಕದೆ ಇರಲು ಸ್ವಾಮಿಗಳು ಅಲ್ಲಿದ್ದ ಬಾಲಕರನ್ನು ವಿಚಾರಿಸಲು ಅವರುಗಳನ್ನು ತಮ್ಮ ಹತ್ತಿರ ಬರುವಂತೆ ಕರೆದರು. ಆದರೆ ಆ ಮಕ್ಕಳೆಲ್ಲಾ ಅವರ ಹತ್ತಿರ ಹೋಗಲು ಭಯಪಟ್ಟು ಓಡಿಹೋದರು. ತೇಜೋವಂತನಾದ ಲಕ್ಷ್ಮೀನಾರಾಯಣನು ಅವರ ಹತ್ತಿರ ಬಂದನು. ಸ್ವರ್ಣವರ್ಣ ತೀರ್ಥರು ಪುರುಷೋತ್ತಮತೀರ್ಥ ಸ್ವಾಮಿಗಳನ್ನು ನೋಡಲು ಅಲ್ಲಿಗೆ ಬಂದದ್ದರಿಂದ ಅವರಿರುವ ಜಾಗವನ್ನು ಅವನನ್ನು ವಿಚಾರಿಸಿದರು. ಅವನು ಧೈರ್ಯವಾಗಿ, ಚೆನ್ನಾಗಿ ಮಾತನಾಡುತ್ತಿದ್ದುದರಿಂದ ಅವರಿಗೆ ಅವನನ್ನು ಬಿಡಲು ಮನಸ್ಸಿಲ್ಲದೆ ತಮ್ಮ



ಶ್ರೀಪಾದರಾಜರು

ಶ್ರೀಪಾದರಾಯರ ಆರುನೂರನೇ ವರ್ಷ ಜಯಂತಿ ಕರ್ನಾಟಕಾದ್ಯಂತ ಆಚರಿಸಲು ಏರ್ಪಾಡುಗಳು ನಡೆದಿವೆ. ಮುಳಬಾಗಿಲಿನ ಶ್ರೀಪಾದರಾಜ ಮಠದ ವತಿಯಿಂದ ಪುಸ್ತಕ ಪ್ರಕಟನೆ, ಆರಾಧನೆ, ಉಪನ್ಯಾಸ ಕಾರ್ಯಕ್ರಮಗಳು ಏರ್ಪಾಡಾಗಿವೆ.

ಜೊತೆಯಲ್ಲಿಯೇಮೇನೆಯಲ್ಲಿ ಬರುವಂತೆ ಅವನನ್ನು ಕರೆದರು. ಆದರೆ ಅವನು ಒಪ್ಪದಿರಲು ಪ್ರೀತಿಯಿಂದ ಅವನ ತಲೆಯನ್ನು ಸವರಿ ಅಕ್ಷತೆಕಾಳನ್ನು ಹಾಕಿ ಆಶೀರ್ವದಿಸಿದರು. ಮುಂದೆ ಅವರು ಪುರುಷೋತ್ತಮ ತೀರ್ಥರ ಮಠಕ್ಕೆ ಹೋಗಿ ಅಲ್ಲಿ ಅವರನ್ನು ಸಂಧಿಸಿದರು. ಅಲ್ಲಿ ಲಕ್ಷ್ಮೀನಾರಾಯಣನ ದೊಡ್ಡಪ್ಪನ ಮಗನಾದ ಬ್ರಹ್ಮಣ್ಯತೀರ್ಥನಾಮದಿಂದಿದ್ದ ಬಾಲಯತಿಯನ್ನು ನೋಡಿ ಸಂತೋಷಿಸಿ ತಮಗೂ ಇಂಥಹ ಒಬ್ಬ ಶಿಷ್ಯನು ದೊರಕಬೇಕೆಂಬ ಆಸೆಯನ್ನು ವ್ಯಕ್ತಪಡಿಸಿದರು. ಪುರುಷೋತ್ತಮತೀರ್ಥರು ಅದಕ್ಕೆ ಹರಿಕೃಪೆಯಿಂದ ಅಲ್ಲಿಯೇ ದೊರೆತಾನೆಂದು ಉತ್ತರವಿತ್ತರು.

ಅನಂತರ ಲಕ್ಷ್ಮೀನಾರಾಯಣನು ತೋಟಕ್ಕೆ ವಾಪಸ್ಸು ಬಂದು ತಮ್ಮ ದನಗಳನ್ನೆಲ್ಲಾ ಕೊಟ್ಟಿಗೆಗೆ ಸೇರಿಸಿ ಮನೆಗೆ ಬಂದನು. ಇವನು ಬಹಳ ಹೊತ್ತು ಬಾರದೆ ಇದ್ದುದರಿಂದ ಅವನ ತಾಯಿ ಗಿರಿಯಮ್ಮನು ಇವನನ್ನು ನೋಡಿ ಸಂತೋಷಪಟ್ಟಳು. ಲಕ್ಷ್ಮೀನಾರಾಯಣನು ಅವನ ತಾಯಿಗೆ ಸ್ವರ್ಣವರ್ಣ ತೀರ್ಥಸ್ವಾಮಿಗಳನ್ನು ತಾನು ಸಂಧಿಸಿದುದನ್ನೂ, ಅವರು ತನ್ನ ಜೊತೆಯಲ್ಲಿ ಪ್ರೀತಿಯಾಗಿ ಮಾತನಾಡಿಸಿ ತನ್ನನ್ನು ಮುಟ್ಟಿ ತನ್ನ ತಲೆಯಮೇಲೆ ಅಕ್ಷತೆಕಾಳನ್ನು ಹಾಕಿ ಆಶೀರ್ವದಿಸಿದನ್ನೂ, ತನ್ನನ್ನು ಸ್ವಾಮಿಯಾಗಿ ಬರುವಂತೆ ಕೇಳಿದುದನ್ನೂ ತಿಳಿಸಿದನು. ಇದನ್ನು ಕೇಳಿದ ಅವನ ಮಾತಾ ಪಿತೃಗಳಿಗೆ ಸ್ವಲ್ಪ ಯೋಚನೆಯುಂಟಾಯಿತು. ಆದರೆ ಅದರ ಜೊತೆಗೆ ಸ್ವಾಮಿಗಳು ಅವನ ತಲೆಯ ಮೇಲೆ ಕೈಯಿಟ್ಟು ಆಶೀರ್ವದಿಸಿದುದರಿಂದ ಪರಮಾನುಗ್ರಹ ವಾಯಿತೆಂದೂ ಸಂತೋಷವನ್ನು ಪಟ್ಟರು. ಮಾರನೆಯ ದಿವಸ ಶೇಷಗಿರಿ ಆಚಾರ್ಯರು ತಮ್ಮ ಪತ್ನೀ ಪುತ್ರರೊಂದಿಗೆ ಸ್ವಾಮಿಗಳ ದರ್ಶನಕ್ಕೆ ಹೋದರು. ಆಗ ಸ್ವಾಮಿಗಳು ಅವರನ್ನು ಅವರ ಮಗನ ವಿದ್ಯಾಭ್ಯಾಸದ ವಿಷಯವನ್ನು ವಿಚಾರಿಸಿದರು. ಅದಕ್ಕೆ ಶೇಷಗಿರಿ ಆಚಾರ್ಯರೂ ಅವರ ಪತ್ನಿಯೂ ತಾವು ಬಹಳ ಬಡವರಾಗಿರುವುದರಿಂದ ಅವನ ವಿದ್ಯಾಭ್ಯಾಸವನ್ನು ಮುಂದುವರಿಸಲು ಶಕ್ತರಲ್ಲವೆಂದೂ, ಅವನಿಗೆ ಉಪನಯನವನ್ನೂ ಮಾಡಲು ಸಹ ಅಶಕ್ತರೆಂಬುದನ್ನು ಸ್ವಾಮಿಗಳಿಗೆ, ಬಿನ್ನವಿಸಿದರು. ಇದನ್ನು ಕೇಳಿದ ಸ್ವಾಮಿಗಳು ಅವರ ಮಗನ ಉಪನಯನವನ್ನು ಮಾಡಿ ಅವನ ವಿದ್ಯಾಭ್ಯಾಸವನ್ನು ಮುಂದುವರೆಸುವುದು ತಮ್ಮ ಜವಾಬ್ದಾರಿಯೆಂದು ತಿಳಿಸಿದರು. ಅದೂ ಅಲ್ಲದೆ ಅವರಿಬ್ಬರನ್ನೂ ತಮ್ಮ ಮಠದಲ್ಲಿಯೇ ಇರುವಂತೆ ಅನುಗ್ರಹಿಸಿದರು.

ಸ್ವರ್ಣವರ್ಣತೀರ್ಥರ ಅನುಜ್ಞೆಯಂತೆ ಲಕ್ಷ್ಮೀನಾರಾಯಣನ ಉಪನಯನವು ಮಠದಲ್ಲಿಯೇ ನಡೆಸಲ್ಪಟ್ಟಿತು. ಅಲ್ಲದೆ ಕಾಲಕ್ರಮದಲ್ಲಿ ಅವನ ವಿದ್ಯಾಭ್ಯಾಸವು ಮುಂದುವರಿದು ಅವನ್ನು ಒಳ್ಳೆಯ ಪಂಡಿತನಾದನು. ಸ್ವರ್ಣವರ್ಣತೀರ್ಥರು ಅವನ ಮಾತಾಪಿತೃಗಳ ಒಪ್ಪಿಗೆಯನ್ನು ಪಡೆದು ಲಕ್ಷ್ಮೀನಾರಾಯಣನಿಗೆ ಆಶ್ರಮಸ್ವೀಕಾರ ಮಾಡಿಸಿ ತಮ್ಮ ಸ್ಥಾನಕ್ಕೆ ಅವನನ್ನು ಉತ್ತರಾಧಿಕಾರಿಯನ್ನಾಗಿ ಮಾಡಿದರು. ಅಲ್ಲದೆ ತಮಗೆ ವೃದ್ಧಾಪ್ಯವಾಗಿದ್ದುದರಿಂದ ತಮ್ಮ ಕಾಲವನ್ನು ಶ್ರೀರಂಗಕ್ಷೇತ್ರದಲ್ಲಿ ಕಳೆಯಲು ಹೊರಟುಹೋದರು. ಹೋಗುವುದಕ್ಕೆ ಮುಂಚೆ ಲಕ್ಷ್ಮೀನಾರಾಯಣನಿಗೆ ತಮ್ಮ ಸನ್ಯಾಸಿಗಳ ಪೂಜಾಪದ್ಧತಿಯನ್ನೆಲ್ಲಾ ಬೋಧಿಸಿದರು. ಅಂದು ಗೋವುಗಳನ್ನು ಕಾಯುತ್ತಿದ್ದು ಗೊಲ್ಲನಾಗಿದ್ದ ಲಕ್ಷ್ಮೀನಾರಾಯಣನು ಇಂದು ಸ್ವಾಮಿಗಳ ಕೃಪೆಯಿಂದ ಲಕ್ಷ್ಮೀನಾರಾಯಣಯೋಗಿಯಾದನು,

ಆಶ್ರಮ ಸ್ವೀಕಾರ ಮಾಡಿದ ಮೇಲೆ ಲಕ್ಷ್ಮೀನಾರಾಯಣಯೋಗಿಗಳಿಗೆ ವಿಭುದೇಂದ್ರ ಸ್ವಾಮಿಗಳ ಜೊತೆಯಲ್ಲಿ ಸಂಚಾರ ಮಾಡುವ ಯೋಗವು ಉಂಟಾಗಿ ಅವರ ಖ್ಯಾತಿ ಎಲ್ಲಾ ಕಡೆಗೂ ಹರಡಿತು. ಲಕ್ಷ್ಮೀನಾರಾಯಣ ಯೋಗಿಗಳೂ ವಿಬುಧೇಂದ್ರಸ್ವಾಮಿಗಳೂ ಒಟ್ಟಿಗೆ ಸಂಚಾರಮಾಡುತ್ತಾ ಕೊಪ್ರವೆಂಬ ನರಸಿಂಹಕ್ಷೇತ್ರಕ್ಕೆ ಒಂದು ಅಲ್ಲಿ ಚಾತುರ್ಮಾಸದ ಸಂಕಲ್ಪಕ್ಕಾಗಿ ಬಿಡಾರ ಹೂಡಿದರು. ಆಗ ಅಲ್ಲಿಗೆ ಬಂದಿದ್ದ ವಿಬುಧೇಂದ್ರರ ಶಿಷ್ಯರಾದ ರಘುನಾಥತೀರ್ಥರು ಲಕ್ಷ್ಮೀನಾರಾಯಣ, ಯೋಗಿಗಳ ಪಾಂಡಿತ್ಯವನ್ನು ಪರೀಕ್ಷಿಸಬೇಕೆಂದು ನ್ಯಾಯಸುಧೆಯ ಒಂದು ಕ್ಲಿಷ್ಟವಾದ ವಾಕ್ಯವನ್ನು ಅವರೊಂದಿಗೆ ಚರ್ಚಿಸಿದರು. ಆಗ ಲಕ್ಷ್ಮೀನಾರಾಯಣ ಯೋಗಿಗಳು ಇಡೀ ಸುಧಾಗ್ರಂಥವನ್ನು ವಿಶದಪಡಿಸಲು ರಘುನಾಥತೀರ್ಥರು ಇವರ ಪಾಂಡಿತ್ಯಕ್ಕೆ ಆಶ್ಚರ್ಯವನ್ನು ಹೊಂದಿ ಇವರನ್ನು ಬಹಳ ಪ್ರಶಂಸೆಮಾಡಿದರು. ಅಲ್ಲದೆ ಮುಂದೆ ಲೋಕ ವಿಖ್ಯಾತರಾಗುತ್ತಾರೆಂದೂ, ಅವರ ಅಸಾಧಾರಣ ಪಾಂಡಿತ್ಯದಿಂದ ರಾಜರುಗಳಿಂದಲೂ ಪೂಜಿಸಲ್ಪಡುತ್ತಾರೆಂದೂ ತಿಳಿಸಿ ಅವರನ್ನು ಶ್ರೀಪಾದರಾಜರು ಎಂಬ ಹೆಸರಿಂದ ಕರೆದು ಅಭಿನಂದಿಸಿದರು. ಅಂದಿನಿಂದ ಇವರು ಶ್ರೀಪಾದರಾಜರೆಂಬ ಹೆಸರಿನಿಂದ ಖ್ಯಾತಿ ಪಡೆದರು. ಇವರು ತಮ್ಮ ಸಂಚಾರವನ್ನು ಮುಗಿಸಿಕೊಂಡು ಬಂದ ಕೆಲವು ದಿವಸದಲ್ಲಿಯೇ ಸ್ವರ್ಣತೀರ್ಥಸ್ವಾಮಿಗಳು ಬೃಂದಾವನಸ್ಥರಾದ ಸಮಾಚಾರವು ತಿಳಿಯಿತು. ಮಧ್ವಾಚಾರ್ಯರ ಪ್ರಥಮ ಶಿಷ್ಯರಾದ ಪದ್ಮನಾಭತೀರ್ಥರ ಮಠದ ಸರ್ವರೀತಿಯ ಆಧಿಪತ್ಯವೂ ಶ್ರೀಪಾದರಾಜರದೇ ಆಯಿತು. ಶ್ರೀಪಾದರಾಜರು ಕಾಲಕ್ರಮದಲ್ಲಿ ಶ್ರೀಪಾದರಾಯರೆಂದು ಕರೆಯಲ್ಪಟ್ಟರು.

ಶ್ರೀಪಾದರಾಯರು ಮಠದ ಆಧಿಪತ್ಯವನ್ನು ವಹಿಸಿಕೊಂಡ ಮೇಲೆ ಸಮಾಜವು ಬರೀಪಾಂಡಿತ್ಯದಿಂದ ಸುಧಾರಣೆಯಾಗುವುದಿಲ್ಲ ವೆಂಬುದನ್ನು ತಮ್ಮ ಅನುಭವದಿಂದ ಅರಿತುಕೊಂಡರು. ಆದ್ದರಿಂದ ಕೀರ್ತನ ರೂಪವಾಗಿ ಭಾಗವತ ಧರ್ಮವನ್ನು ಪ್ರಚಾರಮಾಡಲು ಆಲೋಚಿಸಿದರು. ಆ ಕಾಲದ ಪಂಡಿತರುಗಳು ಗೀರ್ವಾಣ ಭಾಷೆಯೊಂದೇ ಮುಖ್ಯವಾದುದೆಂದು ತಿಳಿದು ಕನ್ನಡ ಭಾಷೆಯಲ್ಲಾಗಲೀ, ತೆಲುಗು ಭಾಷೆಯಲ್ಲಾಗಲೀ ಮಾತನಾಡುವುದು ತಮ್ಮ ಶಿಷ್ಟಾಚಾರಕ್ಕೆ ವಿರೋಧವಾದದ್ದು ಎಂಬ ಭಾವನೆಯನ್ನು ಹೊಂದಿದ್ದರು. ಇದರಿಂದ ಪಾಮರಜನರುಗಳು ಶಾಸ್ತ್ರಪುರಾಣಗಳನ್ನು ತಿಳಿದುಕೊಳ್ಳಲು ಪಂಡಿತರನ್ನೇ ಆಶ್ರಯಿಸಬೇಕಾಯಿತು. ಇದು ಕಷ್ಟಸಾಧ್ಯವಾದ ಕೆಲಸವಾಗಿ ಜನರಲ್ಲಿ ಅಂಧಶ್ರದ್ಧೆಯು ಉಂಟಾಗತೊಡಗಿತು. ಆದರೆ ತಮಿಳುನಾಡಿನ ಪಂಡಿತರು ಗೀರ್ವಾಣ




ಶ್ರೀ ರಘುನಾಥ ತೀರ್ಥರು ಲಕ್ಷ್ಮೀನಾರಾಯಣಯೋಗಿಯನ್ನು "ಶ್ರೀಪಾದರಾಜ" ಎಂದು ಕರೆದರು. ಅಂದಿನಿಂದ ಲಕ್ಷ್ಮೀನಾರಾಯಣ ತೀರ್ಥರು ಶ್ರೀಪಾದರಾಜರಾದರು.

ಚಿತ್ರ - ಅರವಿಂದಕಟ್ಟಿ.

ಭಾಷೆಯನ್ನೂ ತಮಿಳು ಭಾಷೆಯನ್ನೂ ಸಮನಾಗಿ ಭಾವಿಸಿ ತಮಿಳು ಭಾಷೆಗೆ ಗೌರವವನ್ನು ಕೊಟ್ಟಿದ್ದರು. ಇದರಿಂದ ತಮಿಳುನಾಡಿನ ಶ್ರೀವೈಷ್ಣವರ ''ದ್ರಾವಿಡವೇದ'' ಎಂಬ ಪ್ರಬಂಧಗಳಿಗೆ ಬಹಳ ಪ್ರಖ್ಯಾತಿ ಯುಂಟಾಗಿದ್ದಿತು. ತಮಿಳು ಸಂಸ್ಕೃತಿಯ ಕೇಂದ್ರಸ್ಥಾನವಾದ ಶ್ರೀರಂಗ ಮಹಾಕ್ಷೇತ್ರದ ಪ್ರಭಾವದಿಂದಲೂ, ತಮಿಳರ ಭಾಷಾಭಿಮಾನ ದಿಂದಲೂ ತಮಿಳು ಭಾಷೆಯಲ್ಲಿರುವಷ್ಟು ಧರ್ಮ ಗ್ರಂಥಗಳು ಮತ್ತಾವ ಭಾಷೆಯಲ್ಲೂ ಇರಲಿಲ್ಲ. ಇದನ್ನೆಲ್ಲಾ ನೋಡಿದ ಶ್ರೀಪಾದ ರಾಯರಿಗೆ ತಾವೂ ಕನ್ನಡ ಸಂಸ್ಕೃತಿಯನ್ನು ಬೆಳಸಿ ಧರ್ಮ ಗ್ರಂಥಗಳನ್ನೆಲ್ಲಾ ಕನ್ನಡಕ್ಕೆ ಪರಿವರ್ತನೆ ಮಾಡಿ ಪಾಮರ ಜನರಿಗೆ ಜ್ಞಾನೋಪದೇಶ ಮಾಡಬೇಕೆಂಬ ಹಂಬಲವುಂಟಾಯಿತು. ಹಿಂದಿನ ಕಾಲದಲ್ಲಿ ಸಂಸ್ಕೃತ ಪಂಡಿತರುಗಳು ವೇದವನ್ನು ಅಧ್ಯಯನ ಮಾಡುತ್ತಿದ್ದಂತೆ ಶ್ರೀಪಾದರಾಯರು ಅನೇಕ ಭಾಗವತರ ಮೂಲಕ ಕನ್ನಡ ದೇವರನಾಮಗಳನ್ನು ಹಾಡಿಸಿದರು. ರಾಜ ಸಭೆಗಳಲ್ಲಿ ಕನ್ನಡಕವಿಗಳಿಗೆ ಸಂಸ್ಕೃತ ಕವಿಗಳಷ್ಟು ಮರ್ಯಾದೆಯು ಇಲ್ಲದಿದ್ದ ಮತ್ತು ಕನ್ನಡದಲ್ಲಿ ಮಾತನಾಡಿದರೆ ಮೈಲಿಗೆಯೆಂದು ತಿಳಿದಿದ್ದ ಆ ಕಾಲದಲ್ಲಿ ಪಂಡಿತರಾದ ಶ್ರೀಪಾದರಾಯರು ತಾವು ರಚಿಸಿದ ಕನ್ನಡ ದೇವರನಾಮಗಳನ್ನು ದೇವಸ್ಥಾನಗಳಲ್ಲಿ ಪೂಜಾದಿಕಾಲದಲ್ಲಿ ಭಾಗವತರ ಮೂಲಕ ಹಾಡಿಸಿದುದು ಮಹತ್ತಾದ ಸಾಧನೆಯೆಂದು ಹೇಳಬಹುದು. ಪೂಜಾ ಕಾಲದಲ್ಲಿ ಶ್ರೀಪಾದರಾಯರು ರಚಿಸಿದ ಭ್ರಮರಗೀತೆ, ವೇಣುಗೀತೆ ಮತ್ತು ಗೋಪೀಗೀತೆ ಇವುಗಳು ಹಾಡಲ್ಪಡುತ್ತಿದ್ದವು. ಇವುಗಳನ್ನು ಕೇಳುತ್ತಿದ್ದವರು ಭಕ್ತಿರಸದಲ್ಲಿ ಮುಳುಗಿರುತಿದ್ದರು. ಒಮ್ಮೊಮ್ಮೆ ಮಂಗಳಾರತಿಯ ಕಾಲದಲ್ಲಿ ಶ್ರೀಪಾದರಾಯರೇ ಕನ್ನಡ ದೇವರ ನಾಮಗಳನ್ನು ಭಕ್ತಿರಸವಾಗಿ ಹಾಡುತ್ತಿದ್ದುದನ್ನೂ ಇತರ ಭಾಗವತರುಗಳು ಭಕ್ತಿಯಿಂದ ನರ್ತನಮಾಡುತ್ತಿದ್ದುದನ್ನು ನೋಡಲು ಸಾವಿರಾರು ಜನರು ಬರುತ್ತಿದ್ದರು. ಈ ರೀತಿ ಶ್ರೀಪಾದರಾಯರ ಕಾಲದಲ್ಲಿ ಸುಧಾರಣೆ ಯುಂಟಾಗಿ ಕನ್ನಡ ಸಾಹಿತ್ಯಕ್ಕೆ ಸನ್ಮಾನವು ದೊರೆತು, ಅವರು ರಚಿಸಿದ ದೇವರ ನಾಮಗಳನ್ನು ಸ್ತ್ರೀಪುರುಷರಾದಿಯಾಗಿ ಎಲ್ಲರೂ ಕಲಿತು ಹಾಡುತ್ತಿದ್ದರು. ಇಂದಿಗೂ ಸಂಪ್ರದಾಯಸ್ಥರ ಮನೆಗಳಲ್ಲಿ ಹಬ್ಬ ಹುಣ್ಣಿಮೆಗಳಲ್ಲಿ ಇವರ ದೇವರನಾಮಗಳನ್ನು ಹಾಡುವ ಪದ್ಧತಿಯು ಮುಂದುವರೆಯುತ್ತಿದೆ.

ಆ ಕಾಲದಲ್ಲಿ ಅಂದರೆ ಕ್ರಿ.ಶ. 1471 ರಲ್ಲಿ ಸಾಳುವ ನರಸಿಂಹರಾಜನು ಚಂದ್ರಗಿರಿಯ ಅರಸನಾಗಿದ್ದನು. ಇವನು ವಿಜಯನಗರದ ವಿರೂಪಾಕ್ಷಭೂಪತಿಯ ಕೈಕೆಳಗೆ ಇದ್ದರೂ ಎಲ್ಲಾ ಯಜಮಾನಿಕೆಯನ್ನೂ ತಾನೇ ವಹಿಸಿ ಕೊಂಡಿದ್ದನು. ವಿರೂಪಾಕ್ಷನು ಅರ್ಚಕರ ಮಾತಿಗೆ ಮರುಳಾದ. ಇದನ್ನೆಲ್ಲಾ ನರಸಿಂಹರಾಜನು ಅರಿತು ಅರ್ಚಕರ ಅಕೃತ್ಯವನ್ನು ಸೈರಿಸದೆ ಅವರ ಕುಲವನ್ನೆಲ್ಲಾ ನಾಶಪಡಿಸಿದನು. ಆದರೆ ದುಷ್ಟರನ್ನು ಶಿಕ್ಷಿಸಿದರೂ ತಾನು ಬ್ರಹ್ಮಹತ್ಯಕಾರನಾದನೆಂಬ ವ್ಯಥೆಯು




ಶಿಷ್ಯರ ಗಂಗಾಸ್ನಾನದ ಅಪೇಕ್ಷೆಯನ್ನು ಪೂರೈಸಲು ಶ್ರೀಪಾದರಾಜರು ಗಂಗೆಯನ್ನು ಮುಳಬಾಗಿಲಿನ ನರಸಿಂಹ ತೀರ್ಥಕ್ಕೆ ಆಹ್ವಾನಿಸಿದರು. ಗಂಗೆ ನರಸಿಂಹ ತೀರ್ಥಕ್ಕೆ ಆಗಮಿಸಿದಳು.

ಚಿತ್ರ - ಅರವಿಂದಕಟ್ಟಿ.



ಸಾಳುವ ನರಸಿಂಹರಾಯ ಶ್ರೀಪಾದರಿಗೆ ಕನಕಾಭಿಷೇಕ ಮಾಡಿದ.

ಚಿತ್ರ - ಅರವಿಂದಕಟ್ಟಿ

ನರಸಿಂಹರಾಜನ ಮನಸ್ಸಿನಲ್ಲಿ ಕೊರೆಯುತ್ತಿದ್ದಿತು. ಅವನು ಶ್ರೀಪಾದರಾಜರನ್ನು ಸಂಧಿಸಿ ತಾನು ಆ ಬ್ರಹ್ಮಹತ್ಯಾಪಾಪದಿಂದ ಮುಕ್ತನಾಗಲು ಯಾವ ಶಾಂತಿಯನ್ನು ಮಾಡಬೇಕೆಂದು ತಿಳಿಸುವಂತೆ ಪ್ರಾರ್ಥಿಸಿದನು. ಅವನ ಪ್ರಾರ್ಥನೆಯನ್ನು ಲಾಲಿಸಿ ಶ್ರೀಪಾದರಾಯರು ಚಂದ್ರಗಿರಿಗೆ ಬಂದು ನೆಲಸಿ ಅವನಿಂದ ಅನೇಕ ಶಾಂತಿಗಳನ್ನು ಮಾಡಿಸಿ ಅವನ ಬ್ರಹ್ಮಹತ್ಯೆಯ ಕಳಂಕವನ್ನು ನಿವಾರಿಸಿದರು. ಇದರಿಂದ ಮನಸ್ಸಿನಲ್ಲಿ ತೃಪ್ತಿಹೊಂದಿ ಸಂತುಷ್ಟನಾದ ರಾಜನು ಶ್ರೀಪಾದರಾಯರ ಅಸಾಧಾರಣ ಪಾಂಡಿತ್ಯಕ್ಕೂ, ಸದ್ಗುಣಗಳಿಗೂ ಮನಸೋತು ಅವರನ್ನು ತನ್ನ ಸಿಂಹಾಸನದ ಮೇಲೆ ಕೂರಿಸಿ ಕನಕಾಭಿಷೇಕವನ್ನು ಮಾಡಿಸಿದನು. ಶ್ರೀಪಾದರಾಯರ ಮುಖ್ಯ ಶಿಷ್ಯರಾದ ವ್ಯಾಸರಾಯರು ತಮ್ಮ ದೇವರ ನಾಮಗಳಲ್ಲಿ ಶ್ರೀಪಾದರಾಯರು ಮುತ್ತಿನ ಕವಚವನ್ನೂ, ತಲೆಯಮೇಲೆ ರತ್ನಕಿರೀಟವನ್ನು ಧರಿಸಿದ್ದರೆಂದು ತಿಳಿಸಿರುತ್ತಾರೆ.

ಅನಂತರ ಶ್ರೀಪಾದರಾಯರು ಉತ್ತರ ದೇಶದ ಯಾತ್ರೆಯನ್ನು ಮುಗಿಸಿಕೊಂಡು ಮುಳಬಾಗಲಿಗೆ ಹಿಂತಿರುಗಬೇಕೆಂದು ಸಂಕಲ್ಪಿಸಿದ್ದರು. ಆದರೆ ಅಷ್ಟರೊಳಗೆ ನರಸಿಂಹಭೂಪಾಲನ ಸಹಕಾರದಿಂದ ತಮ್ಮ ಶಿಷ್ಯರೊಂದಿಗೆ ಕಾಶಿಯಾತ್ರೆಗೆ ಹೋದರು. ಅಲ್ಲಿ ವಿದ್ವತ್ಸಭೆಗಳಲ್ಲಿ ಭಾಗವತ ಧರ್ಮವನ್ನು ಎಲ್ಲರಿಗೂ ಬೋಧಿಸಿದರು. ಅಲ್ಲಿನ ಗರ್ವಿಷ್ಟರಾದ ಪಂಡಿತರುಗಳಿಗೆ ಇದು ಸಹನೆಯಾಗದೆ ಅವರುಗಳು ಇವರನ್ನು ಹೀಯಾಳಿಸಿದರು. ಆಗ ಶ್ರೀಪಾದರಾಯರು ಕಾಶಿರಾಜನ ಅಧ್ಯಕ್ಷತೆಯಲ್ಲಿ ಆ ಪಂಡಿತರುಗಳೊಂದಿಗೆ ತರ್ಕ, ವೇದಾಂತ, ವ್ಯಾಕರಣ - ಮುಂತಾದ ವಿಷಯಗಳನ್ನೆಲ್ಲಾ ವಾದಮಾಡಿ ಅವರುಗಳನ್ನು ಸೋಲಿಸಿದರು. ಆ ಸೋತಪಂಡಿತರು ಸನ್ಯಾಸವನ್ನು ಸ್ವೀಕಾರ ಮಾಡಬೇಕಾಯಿತು. ಇದರಿಂದ ಅಸೂಯೆ ಗೊಂಡ ಅವರುಗಳು ಸ್ವಾಮಿಗಳ ಮೇಲೆ ಚಾಟುತಂತ್ರಗಳನ್ನು ಎಸಗಲು ಶ್ರೀಪಾದರಾಯರು ಹಯಗ್ರೀವಮಂತ್ರಗಳ ಪುನಶ್ಚರಣೆಯಿಂದ ವಿಪತ್ತಿನಿಂದ ಪಾರಾದರು.

ಸ್ವಾಮಿಗಳು ಅವರ ಕಾಲದಲ್ಲಿ ಅನೇಕ ಅತಿಮಾನುಷ ಮಹಿಮೆಗಳನ್ನು ತೋರಿಸಿದರು. ತಮ್ಮ ಕಾಶಿಯಾತ್ರೆಯನ್ನು ಮುಗಿಸಿಕೊಂಡು ಶ್ರೀಪಾದರಾಯರು ಮುಳಬಾಗಲಿಗೆ ವಾಪಸ್ಸು ಬರಲು ಅಲ್ಲಿನ ಅವರ ಶಿಷ್ಯರೆಲ್ಲರೂ ಅವರನ್ನು ಮರ್ಯಾದೆಯಿಂದ ಸ್ವಾಗತಿಸಿ ಅವರು ಗಂಗಾಸ್ನಾನವನ್ನು ಮಾಡಿಕೊಂಡು ಬಂದಂತೆ ತಮಗೂ ಗಂಗಾಸ್ನಾನವನ್ನು ಮಾಡುವ ಅನುಕೂಲವನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿಸಿದರು. ಆದರೆ ಇಷ್ಟು ಜನರಿಗೂ ಕಾಶಿಯಾತ್ರೆಯನ್ನು ಮಾಡಿಸುವುದು ಅಸಾಧ್ಯವಾದುದೆಂಬುದನ್ನು ಸ್ವಾಮಿಗಳು ಅರಿತಿದ್ದರು. ಅನಂತರ ಆಲೋಚನೆ ಮಾಡಿ ಅವರೆಲ್ಲರೂ ಮಾರನೆಯ ದಿವಸ ನರಸಿಂಹತೀರ್ಥದಲ್ಲಿ ಗಂಗಾಪೂಜೆಯನ್ನು ಮಾಡಲು ಬಂದರೆ ಅವರಿಗೆಲ್ಲಾ ಗಂಗಾಸ್ನಾನವಾಗುವುದೆಂದು ಅಭಯವನ್ನು ನೀಡಿದರು. ಆ ದಿವಸ ಮಠದಲ್ಲಿ ಸ್ವಾಮಿಗಳು ವಿಶೇಷ ಪೂಜೆಗಳನ್ನು ನಡೆಸಿ ರಾತ್ರಿ ಜಾಗರಣೆ ಮಾಡಿ ಜಾಹ್ನವಿಯನ್ನು ಅಂದರೆ ಗಂಗಾಮಾತೆಯನ್ನು ಸ್ತೋತ್ರಮಾಡಿ ಮಾರನೆಯದಿವಸ ನರಸಿಂಹತೀರ್ಥದಲ್ಲಿ ಪ್ರವಾಹರೂಪವಾಗಿ ಬಂದು ತಮ್ಮ ಶಿಷ್ಯರನ್ನು ಒಲಿಸುವಂತೆ ಪ್ರಾರ್ಥಿಸಿದರು. ಮಾರನೆಯ ದಿವಸ ಇವರು ತಮ್ಮ ಪ್ರಾತಃಸ್ನಾನಾದಿ ಆಹ್ನೀಕಗಳನ್ನು ಮುಗಿಸಿಕೊಂಡು ನರಸಿಂಹತೀರ್ಥಕ್ಕೆ ಬರುವ ವೇಳೆಗೆ ಇವರ ಪ್ರಾರ್ಥನೆಗೆ ಓಗೊಟ್ಟು ಗಂಗಾಮಾತೆಯು ಬುಳುಬುಳನೇ ಪ್ರವಾಹರೂಪವಾಗಿ ಹರಿದು ಬಂದು ಸರೋವರವನ್ನು ತುಂಬಿದಳು. ಗಂಗಾ ಮಾತೆಯನ್ನು ಧ್ಯಾನಮಾಡುತ್ತಾ ಕುಳಿತಿದ್ದ ಶ್ರೀಪಾದರಾಯರಿಗೂ ಕೂತ ಬಳಿಯಲ್ಲಿಯೇ ಗಂಗಾಸ್ನಾನವಾಯಿತು. ಅನಂತರ ಅವರ ಅಪ್ಪಣೆಯನ್ನು ಪಡೆದು ಅವರ ಶಿಷ್ಯರೆಲ್ಲರೂ ''ಹರಿ ಓಂ'' ಎಂದು ಸ್ತೋತ್ರಮಾಡುತ್ತಾ ಗಂಗಾಸ್ನಾನ ಮಾಡಿ ಕೃತಾರ್ಥರಾದರು. ಇಂದಿಗೂ ನರಸಿಂಹತೀರ್ಥದ ಈಶಾನ್ಯ ಭಾಗದಲ್ಲಿ ಸ್ನಾನಮಾಡಿದವರು ಗಂಗಾಸ್ನಾನ ವಾಯಿತೆಂದು ತೃಪ್ತಿಪಡುತ್ತಾರೆ.

ಒಮ್ಮೆ ಶ್ರೀಪಾದರಾಯರು ಶಂಖೋದಕ ಪ್ರೋಕ್ಷಣೆಯಿಂದ ಬ್ರಹ್ಮಹತ್ಯಾಪಾತಕಿಯಾದ ಬ್ರಾಹ್ಮಣನೊಬ್ಬನ ಪಾಪವನ್ನು ಪರಿಹರಿಸಿದರು. ಹಿಂದೆ ವ್ಯಾಸರಾಯರು ಚಿಕ್ಕ ಬಾಲಕರಾಗಿದ್ದಾಗ ಪುರುಷೋತ್ತಮ ಗುಹೆಯಲ್ಲಿ ನಿದ್ರೆ ಮಾಡುತ್ತಿರಲು ದೊಡ್ಡದಾದ ಹಾವೊಂದು ಅವರನ್ನು ನುಂಗಲು ಬಂದಿತು. ಆಗ ಶ್ರೀಪಾದರಾಯರು ಆ ಹಾವಿನೊಂದಿಗೆ ಸರ್ಪಭಾಷೆಯಲ್ಲಿ ಮಾತನಾಡಿ ಅವರ ಆಪತ್ತನ್ನು

ನಿವಾರಿಸಿದರು. ಇನ್ನೊಮ್ಮೆ ಭೀಮರಥೀ ತೀರದಲ್ಲಿ ಭೂಸ್ಥಾಪಿತವಾಗಿದ್ದ ಸ್ವರ್ಣದ ಪೆಟ್ಟಿಗೆಯೊಂದನ್ನು ತಮ್ಮ ಸ್ವಪ್ನ ಸೂಚನೆಯಿಂದ ತೆಗೆಸಿ ಆ ಪೆಟ್ಟಿಗೆಯಲ್ಲಿದ್ದ ರಂಗವಿಠಲದೇವರನ್ನು ತಮ್ಮ ಪೂಜಾಮಂದಿರದಲ್ಲಿ ಇಟ್ಟುಕೊಂಡು ಪೂಜೆ ಮಾಡಿದರು. ಶ್ರೀಪಾದರಾಯರು ಎಲ್ಲಿದ್ದರೂ ಅನೇಕ ಬಗೆಯ ಭಕ್ಷ್ಯಗಳನ್ನು ಮಾಡಿಸಿ ದೇವರಿಗೆ ನೈವೇದ್ಯಮಾಡಿ ಅನಂತರ ತಮ್ಮ ಭಿಕ್ಷೆಯನ್ನು ಸ್ವೀಕರಿಸುತ್ತಿದ್ದರು. ಇವರನ್ನು ಪರೀಕ್ಷಿಸಲು ಒಮ್ಮೆ ರಾಜನು ಇವರನ್ನು ಅರಣ್ಯದಲ್ಲಿ ಇರಿಸಿ ಅವರಿಗೆ ಯಾವ ವಸ್ತುವೂ ಸಿಗದಂತೆ ಮಾಡಲು ಪ್ರಯತ್ನಿಸಿದನು. ಆದರೆ ಅಂದು ಮಧ್ಯಾಹ್ನದ ಕಾಲಕ್ಕೆ ಸರಿಯಾಗಿ ಯಾರೋ ಭಗವತ್ಪ್ರೇರಣೆಯಿಂದ ಎಲ್ಲಾ ವಸ್ತುಗಳನ್ನೂ ಒದಗಿಸಲು ಶ್ರೀಪಾದರಾಯರ ಪೂಜಾಭಿಕ್ಷೆಯು ಕಾಲವಿಳಂಬವಾಗದೆ ಸಾಂಗವಾಗಿ ನಡೆಯಿತು. ಇದನ್ನು ಅರಿತ ರಾಜನು ಪಶ್ಚಾತ್ತಾಪವನ್ನು ಹೊಂದಿ ಇವರ ಕ್ಷಮಾಪಣೆಯನ್ನು ಬೇಡಿ ಶರಣಾಗತನಾದನು.

ಪರಮಾತ್ಮನನ್ನು ಒಲಿಸಿಕೊಂಡವರ ಜೀವನದಲ್ಲಿ ಈ ರೀತಿ ಅತಿಶಯವಾದ ಮಹಿಮೆಗಳು ನಡೆಯುವುದು ಅತಿಶಯವೇನಲ್ಲ. ಶ್ರೀಪಾದರಾಯರು ತಮ್ಮ ಜೀವನದಲ್ಲಿ ಕನ್ನಡಕ್ಕೆ ಮರ್ಯಾದೆಯನ್ನು ಒದಗಿಸಿದ ಉಪಕಾರವು ಚಿರಸ್ಮರಣೀಯವಾದುದು. ಇವರ ಪ್ರಯತ್ನದಿಂದಲೇ ದಾಸಸಾಹಿತ್ಯವು ಪ್ರಾರಂಭವಾಗಿ ಹೊಸಗನ್ನಡದ ಶೈಲಿಯು ಹುಟ್ಟಿ ಅನೇಕ ಬ್ರಾಹ್ಮಣರು ಕನ್ನಡದಲ್ಲಿ ಪಂಡಿತರಾದರು. ಇವರ ಕಾಲದಲ್ಲಿಯೇ ಭಾರತ, ತೊರವೆಯ ರಾಮಾಯಣ, ಭಾಗವತ ಮುಂತಾದ ಉದ್ದಾಮಗ್ರಂಥಗಳು ರಚಿತವಾದವು. ಇವರು ಭಾಗವತ ದಶಮಸ್ಕಂದವನ್ನು ದೇವರ ನಾಮಗಳಾಗಿ ರಚಿಸಿ ಪ್ರಚಾರಕ್ಕೆ ತಂದರು. ಇವರು ಕ್ರಿ.ಶ. 1486 ವರೆಗೆ ಬಹಳ ವರ್ಷ ಧರ್ಮಪೀಠದಲ್ಲಿದ್ದು ಕಾಲಕ್ರಮದಲ್ಲಿ ಜ್ಯೇಷ್ಠ ಶುದ್ಧ ಚತುರ್ದಶಿಯ ದಿವಸ ಬೃಂದಾವನಸ್ಥರಾದರು. ಇವರ ಬೃಂದಾವನವು ಮುಳಬಾಗಲಿನ ಹತ್ತಿರವಿರುವ ನರಸಿಂಹ ತೀರ್ಥದ ಬಳಿಯಲ್ಲಿದೆ. ಹಿಂದಿನ ಕಾಲದಿಂದಲೂ ಶ್ರೀಪಾದರಾಯರ ರಥೋತ್ಸವ ವನ್ನು ಪ್ರತಿವರ್ಷವೂ ಮಠದ ಪರಂಪರೆಯವರು ನಡೆಸಿಕೊಂಡು ಬರುತ್ತಿದ್ದಾರೆ. ಇಂತಹ ಶ್ರೀಪಾದರಾಯರು ಕರ್ನಾಟಕಕ್ಕೆ ಮಾಡಿದ ಸೇವೆಯು ಚಿರಸ್ಮರಣೀಯವಾದುದು.

ಭೂಷಣಕೆ ಭೂಷಣ ಇದು ಭೂಷಣ
ಶೇಷಗಿರಿ ವಾಸ ಶ್ರೀ ವರ ವೆಂಕಟೇಶ
ನಾಲಿಗ್ಗೆ ಭೂಷಣ ನಾರಾಯಣ ನಾಮ
ಕಾಲಿಗೆ ಭೂಷಣ ಹರಿಯಾತ್ರೆಯು
ಆಲಯಕೆ ಭೂಷಣ ತುಲಸಿ ವೃಂದಾವನ ವಿ
ಶಾಲ ಕರ್ಣಕೆ ಭೂಷಣ ನಿಮ್ಮ ಕಥೆಯು
ದಾನವೇ ಭೂಷಣ ಇರುವ ಹಸ್ತಗಳಿಗೆ
ಮಾನವೇ ಭೂಷಣ ಮಾನಿನಿಗೆ
ಜ್ಞಾನವೇ ಭೂಷಣ ಮುನಿಯೋಗಿ ವರರಿಗೆ
ಮಾನಿನಿಗೆ ಭೂಷಣ ಪತಿಭಕ್ತಿಯು
ರಂಗನನು ನೋಡುವುದೆ ಕಂಗಳಿಗೆ ಭೂಷಣ
ಮಂಗಳಾಂಗಗೆ ಮಣಿವ ಶಿರಭೂಷಣ
ಶೃಂಗಾರ ತುಲಸಿ ಮಣಿ ಕೊರಳಿಗೆ ಭೂಷಣ
ರಂಗ ವಿಠಲ ನಿಮ್ಮಾ ನಾಮ ಅತಿ ಭೂಷಣ

**ಮಧ್ಯಮಾವತಿರಾಗ - ಝಾಪತಾಳ**

ದುರಿತ ಗಜಪಂಚಾನನ
ನರಹರಿಯೇ ಕಾಯೋ ಗೋವಿಂದ
ಮುನ್ನ ಮಾಡಿದ ಕರ್ಮಬೆನ್ನ ಬಿಡದಿದ್ದರೆ
ನಿನ್ನ ಮೊರೆಯ ಹೋಗಲ್ಯಾಕೊ ಗೋವಿಂದ
ಹೆತ್ತಮಕ್ಕಳು ಹುಚ್ಚರಾದರೆ ತಾಯ್ತಂದೆ
ಎತ್ತದೆ ನೆಲಕೆ ಬಿಸುಡುವರೆ ಗೋವಿಂದ
ಒಂದು ಮೃಗಕೆ ಆರು ಹುಲಿ
ಬಂದು ಕವಿದಿವೆ ಕಾದಿವೆ
ಬಂಧನ ಬಿಡಿಸೆನ್ನ ತಂದೆ ಗೋವಿಂದ
ಹೆಸರುಳ್ಳ ನದಿಗಳ ಒಳಕೊಂಬ ಸಮುದ್ರನು
ಬಿಸುಡುವನೇ ಕಾಲ ಹೊಳೆಯ ಗೋವಿಂದ
ಆಪತ್ತು ತಾಪತ್ರಯ ಬಿಡದಿದ್ದರೆ
ಶ್ರೀಪತಿ ಶರಣೆನ್ನಲ್ಯಾಕೋ ಗೋವಿಂದ
ಅಡವಿಯ ವೃಕ್ಷಕೆ ಎರೆವರ್ಯಾರು ನೀರ
ತಡೆಯದೆ ಸಲಹೋ
ಎನ್ನೊಡೆಯ ಗೋವಿಂದ
ಆಡುವ ಬೊಂಬೆಯೋ ಜಗವೆಲ್ಲವು
ನೀನೆ ಆಡಿಪೆ ನಾಟಕಧಾರಿ ಗೋವಿಂದ
ಅರಸು ಮುಟ್ಟಲು ದಾಸಿ
ರಂಭೆಯಾದಳು ದೇವ
ಪರಶು ಮುಟ್ಟಲು
ಲೋಹ ಸ್ವರ್ಣ ಗೋವಿಂದ
ಮಾನಾಭಿಮಾನ ದೊಡೆಯ ರಂಗ ವಿಠಲ
ಜ್ಞಾನಿಗಳರಸ ನೀ ಕಾಯೋ ಗೋವಿಂದ

★



ಶ್ರೀಪಾದರ ಆರಾಧ್ಯದೇವತೆಗಳು ರಂಗವಿಠಲ, ಗೋಪೀನಾಥ, ಶ್ರೀರಂಗ, ಹಯಗ್ರೀವ, ಲಕ್ಷ್ಮಣ ಸೀತಾಸಹಿತ ಶ್ರೀರಾಮ. ಚಿತ್ರ - ಅರವಿಂದಕಟ್ಟಿ

# ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಟ್ರಸ್ಟ್

ತಿ. ತಿ. ದೇವಸ್ಥಾನಗಳ ಪರಿಪಾಲನಾ ಭವನ, ಕೆ.ಟಿ.ರಸ್ತೆ, ತಿರುಪತಿ, (ಆಂ.ಪ್ರ.),

(ನೋಂದಣಿ ಸಂಖ್ಯೆ - 18/94)

**ಡಾ|| ಪಿ. ಕೃಷ್ಣಯ್ಯ,** ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ದಾನಿಗಳೆ;

ಅನ್ನದಾನಕ್ಕಿಂತ ಇನ್ನು ದಾನಗಳಿಲ್ಲ. ನಮ್ಮ ದೇಶದಲ್ಲಿ ಅಗತ್ಯವಿದ್ದವರಿಗೆ, ಹಸಿದವರಿಗೆ ಅನ್ನದಾನ ಮಾಡುವುದು ಒಂದು ಸೇವೆ ಮಾತ್ರವೇ ಅಲ್ಲ, ವೇದಕಾಲದಿಂದಲೂ ಪರಂಪರೆಯಾಗಿ ಆಚರಣೆಯಲ್ಲಿರುವ ಪವಿತ್ರ ಕಾರ್ಯವಾಗಿದೆ. ಅನ್ನದಾನ ಮಾಡುವವರು ದೇವತೆಗಳ ಸಮರಾಗುವರೆಂದು ಹೇಳಲಾಗಿದೆ.

ತಿರುಮಲೆಗೆ ಆಗಮಿಸುವ ಯಾತ್ರಿಕರಿಗೆ ಉಚಿತವಾದ ಹಾಗೂ ಆರೋಗ್ಯಕರವಾದ ಭೋಜನವನ್ನು ನೀಡುವ ಉದ್ದೇಶದಿಂದ ಶ್ರೀ ವೆಂಕಟೇಶ್ವರ ಅನ್ನದಾನ ಟ್ರಸ್ಟ್ 1985 ರಲ್ಲಿ ತಿ. ತಿ. ದೇವಸ್ಥಾನಗಳಿಂದ ಆರಂಭವಾಯಿತು. ಇದಕ್ಕೆ ಭಾರತದ ಎಲ್ಲೆಡೆಗಳಿಂದಲೂ ದಾತರ ಉತ್ಸಾಹಪೂರ್ಣವಾದ ಬೆಂಬಲ ಕಂಡುಬಂದಿದೆ.

**ಈ ಯೋಜನೆಯ ವಿವರಗಳು :**

I. ವ್ಯಕ್ತಿ, ಸಂಘ, ಸಂಸ್ಥೆಗಳವರು ವೈಯಕ್ತಿಕವಾಗಿ ಅಥವಾ ಎರಡೆರಡು ಸಂಘ ಸಂಸ್ಥೆಗಳು ಐದು ಲಕ್ಷ ರೂಪಾಯಿ ಅಥವಾ ಅದರ ಗುಣಕಗಳಲ್ಲಿ ದಾನ ಮಾಡಬಹುದು.

1. ದಾನಿಗಳ ಹೆಸರನ್ನು ಎದ್ದು ಕಾಣುವಂತೆ ಉಚಿತ ಭೋಜನದ ಕೋಣೆಗಳಲ್ಲಿ ಬರೆಸಿಡಲಾಗುವುದು.
2. ದಾನಿಗಳಿಗೆ ವರ್ಷಕ್ಕೆ ಒಮ್ಮೆ ಮೂರುದಿನಗಳ ಕಾಲ ತಿರುಮಲೆಯಲ್ಲಿ ಉಚಿತ ಸುಸಜ್ಜಿತ ವಸತಿ ನೀಡಲಾಗುವುದು.
3. ದಾನಿಯ ಐದುಮಂದಿಗೆ ಉಚಿತವಾಗಿ ದರ್ಶನವನ್ನು ಏರ್ಪಡಿಸಲಾಗುವುದು.
4. ದಾನಿಗಳಿಗೆ ಒಮ್ಮೆ ಮಾತ್ರವೇ ಸ್ವಾಮಿಯ ಹಾಗೂ ಅಮ್ಮನವರ ಬಂಗಾರದ ಮುಲಾಮಿನ ಪ್ರತಿಮೆಗಳ ಜ್ಞಾಪಿಕೆಯನ್ನು ನೀಡಲಾಗುವುದು. ವರ್ಷಕ್ಕೆ ಒಮ್ಮೆ ಉತ್ತರೀಯ ಬಹುಮಾನ ನೀಡಲಾಗುವುದು.
5. 80 (ಜಿ) ಕಲಮು ಹೇಳುವಂತೆ ಈ ದಾನವು ಆದಾಯಕರ ಮುಕ್ತವಾಗಿರುತ್ತದೆ.

II. ಎಸ್. ವಿ. ನಿತ್ಯಾನ್ನದಾನಯೋಜನೆಗೆ ತಮ್ಮ ವಂತಿಗೆಯಾಗಿ ಒಂದು ಸಾವಿರ ರೂಪಾಯಿ ಅಥವಾ ಅದರ ಗುಣಕಗಳಲ್ಲಿ ವಂತಿಗೆಯನ್ನು ನೀಡಿ 80 (ಜಿ.) ಕಲಮಿನನ್ವಯ ಆದಾಯಕರ ವಿಮುಕ್ತಿಯನ್ನು ಪಡೆಯಬಹುದಾಗಿದೆ.

**ದಾನಗಳನ್ನು ಹೇಗೆ ಕಳುಹಿಸಬೇಕು :**

ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಲ್ಲಿ "ಶ್ರೀ ವೆಂಕಟೇಶ್ವರ ನಿತ್ಯಾನ್ನದಾನ ಟ್ರಸ್ಟ್" ಹೆಸರಿನಲ್ಲಿ ಡಿ. ಡಿ. ಯನ್ನು ಪಡೆದು ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ., ತಿರುಪತಿ, ಆಂಧ್ರಪ್ರದೇಶ. ಇವರಿಗೆ ಕಳುಹಿಸಬೇಕು.

ಹೆಚ್ಚಿನ ಮಾಹಿತಿಗಾಗಿ ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ,**

ತಿ.ತಿ.ದೇ. ಪರಿಪಾಲನಾಭವನ - ತಿರುಪತಿ - 517 501.

ನಿತ್ಯಾನ್ನದಾನ ಯೋಜನೆಯಲ್ಲಿ ಭಾಗವಹಿಸಿರಿ.
ಉತ್ತಮ ಉನ್ನತ ಸೇವೆಯಲ್ಲಿ ಪಾಲುದಾರರಾಗಿರಿ.

# ಆಚಾರ್ಯದೇವೋಭವ

- ವಿದ್ವಾನ್ ಕಸ್ತೂರಿ ರಂಗರಾಜನ್.

ಈ ಪ್ರಪಂಚದಲ್ಲಿ ಆಚಾರ್ಯರುಗಳು ಏಕೆ ಅವತರಿಸಬೇಕು? ಆಚಾರ್ಯರುಗಳು ಮಾಡುವ ಉಪಕಾರಗಳಾದರೂ ಏನು? ಈಶ್ವರನ ಅವತಾರ ಒಂದೇ ಸಾಲದೇ? ಸರ್ವೇಶ್ವರನಿಗಿಂತ ಆಚಾರ್ಯರುಗಳು ಹೇಗೆ ಶ್ರೇಷ್ಠರು? ಈ ರೀತಿಯ ಹಲವಾರು ಪ್ರಶ್ನೆಗಳಿಗೆ ಸೂಕ್ತವಾದ ಸಮಾಧಾನವನ್ನು ಹೇಳಿ ಆಚಾರ್ಯರುಗಳ ಮುಖ್ಯತ್ವವೇನೆಂದು ಈ ವ್ಯಾಸದಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ.

''ಸಂಸಾರಸಾಗರಂ ಘೋರಂ, ಅನಂತ ಕ್ಲೇಶ ಭಾಜನಂ''- ಈ ಸಂಸಾರವೆಂಬುದು ಒಂದು ಸಾಗರವಿದ್ದಂತೆ. ಆ ಸಾಗರವೋ, ಅತ್ಯಂತ ಘೋರವೂ, ಅನಂತವಾದ ಕ್ಲೇಶ ಭೂಯಿಷ್ಟತೆಯಿಂದ ಕೂಡಿದುದು ಎಂದು ತ್ರಿಮೂರ್ತಿಗಳಲ್ಲಿ ಮೊದಲಿಗನಾದ ಬ್ರಹ್ಮನು ತನ್ನ ಜಿತಂತಾಸ್ತೋತ್ರದಲ್ಲಿ ಎಚ್ಚರಿಸಿದ್ದಾನೆ. ಈ ಸಂಸಾರವು ಗಾಢಾಂಧಕಾರದಿಂದ ತುಂಬಿದ ಸ್ಥಳ. ಇದರಲ್ಲಿ ಒಳ್ಳೆಯದು ಯಾವುದು? ಕೆಟ್ಟದ್ದು ಯಾವುದು? ನಾವು ಹೋಗುತ್ತಿರುವ, ಅನುಸರಿಸುತ್ತಿರುವ ಮಾರ್ಗವು ಸರಿಯೇ ಅಥವಾ ತಪ್ಪೇ? ಈ ಸಂಸಾರದಲ್ಲಿ ನಮ್ಮ ಸ್ಥಾನ ಮತ್ತು ಪಾತ್ರವೇನು? ಈ ಸಂಸಾರಬಂಧದಿಂದ ಬಿಡುಗಡೆ ಇದೆಯೇ? ನಿತ್ಯವಾದ ಹಾಗೂ ಶಾಶ್ವತವಾದ ಶಾಂತಿ ಮತ್ತು ಮುಕ್ತಿಗೆ ದಾರಿಯಾವುದು ? ಇವೇ ಮೊದಲಾದ ಗಹನವಾದ ವಿಚಾರವನ್ನು ತಿಳಿಯಲು ದಾರಿಯೇ ಇಲ್ಲ, ತಿಳಿಯಲು ಪ್ರಯತ್ನಿಸುವುದೂ ಇಲ್ಲ. ಈ ಸಂಸಾರದಲ್ಲಿ ನಡೆದು ಹೋಗುವವನಿಗೆ ಸಾಧ್ಯವಾದಷ್ಟು ಮಟ್ಟಿಗೆ ಸನ್ಮಾರ್ಗದಲ್ಲಿ ನಡೆಯದೇ ತಪ್ಪುದಾರಿಯೇ, ಅಡ್ಡದಾರಿಯೇ ಅವನಿಗೆ ಪ್ರಿಯವಾಗಿ ಕಂಡುಬಂದು, ಆ ದಾರಿಯಲ್ಲಿಯೇ ಹೋಗಿ ನೂರಾರು ಅಕ್ಷಮ್ಯವಾದ ಅತಿಹೀನವಾದ, ತನ್ನ ಪ್ರಾರಬ್ಧಕರ್ಮದಿಂದ ಸಾಕ್ಷಾತ್ ಭಗವಂತ ನಿಂದಲೂ ಸರಿಪಡಿಸಿ ಕೊಳ್ಳಲಾಗದಂತಹ ಅಕ್ರಮಗಳನ್ನು ಸರಣಿಯಂತೆ ಮಾಡುತ್ತಾ ಬಂದು, ಕೊನೆಗೆ, ಶ್ಲೇಷ್ಮದಲ್ಲಿ ಸಿಕ್ಕ ನೊಣದಂತೆ ಅತ್ಯಂತ ಘೋರವಾದ ನರಕಕೂಪದಲ್ಲಿ ಬೀಳುವನು. ಚೇತನರ ಇಂತಹ ದೀನಸ್ಥಿತಿಯನ್ನು ಕಂಡ, ಆಳ್ವಾರರುಗಳಲ್ಲಿ ಶ್ರೇಷ್ಠರು ಆದ ನಮ್ಮಾಳ್ವಾರರು ತಮ್ಮ ಮೇರು ಕೃತಿಯಾದ ತಿರುವಾಯ್‌ಮೊಳಿ (10-6-1) ದಿವ್ಯ ಪ್ರಬಂಧದಲ್ಲಿ ''ಇರುಳ್ ತರುಮಾಜ್ಞಾಲತ್ತುಳ್ ಇನಿಪ್ಪಿರವಿಯಾನ್‌ವೇಣ್ಡೇನ್'',''ಅಧೋಗತಿಗೆ ಕಾರಣ ಭೂತವಾದ ಈ ಭೂಮಿಯಲ್ಲಿ ಮತ್ತೆ ನನ್ನ ಹುಟ್ಟುವಿಕೆಯು ಬೇಡವೇ ಬೇಡ'' ಎಂದು



ಭಗವಂತನಲ್ಲಿ ಅಂತರಂಗವಾಗಿ ಸ್ತುತಿಸಿ, ಬೇಡಿದ್ದಾರೆ. ಕಗ್ಗತ್ತಲೆಯಿಂದ ಕೂಡಿದ ಸ್ಥಳದಲ್ಲಿ ಪದಾರ್ಥಗಳನ್ನು ತಿಳಿಯಲು ದೊಡ್ಡದಾದ ದೀಪವೊಂದು ಅತ್ಯಂತ ಆವಶ್ಯಕ ಹಾಗೂ ಅನಿವಾರ್ಯವೂ ಕೂಡ. ಅಂತೆಯೇ ತನ್ನಲ್ಲಿ ಭದ್ರವಾಗಿ ನೆಲೆಸಿರುವ ಅಜ್ಞಾನವೆಂಬ ಕತ್ತಲೆಯನ್ನು ದೂರತಳ್ಳಿ ಸುಜ್ಞಾನವೆಂಬ ಜ್ಯೋತಿಯನ್ನು ಪಡೆಯುವುದು ಇಹಪರ ಗಳೆರಡರ ಪ್ರಾಪ್ತಿಗೆ ಅತ್ಯಂತ ಅವಶ್ಯಕ. ಆ ದಿವ್ಯವಾದ ಜ್ಯೋತಿಯೇ - ದೀಪವೇ ಆಚಾರ್ಯರಾಗುವರು. ಈ ಅಸದೃಶ ದೀಪದ ಮೂಲಕವೇ ಅಜ್ಞಾನವೆಂಬ ಕತ್ತಲೆಯಿಂದ, ವಿವರಿಸಲಾಗದದಂತೆ ಅನುಭವಿಸುತ್ತಿರುವ ನರಕಯಾತನೆಯ ಸುಳಿಯಿಂದ ಬಿಡುಗಡೆ ಹೊಂದಿ ಸೌಜನ್ಯ, ಸೌಶೀಲ್ಯ, ಸಾಕಾರತೆ ಯಿಂದ, ವಿವೇಕದಿಂದ ಯುಕ್ತಾಯುಕ್ತತೆಯನ್ನು ತಿಳಿದುಕೊಂಡು ಇಹಪರಗಳೆರಡರ ಪ್ರಾಪ್ತಿಗೂ ಅನುಕೂಲವಾಗುವಂತೆ ಸನ್ಮಾರ್ಗದಲ್ಲಿ ನಡೆದು ಭಗವಂತನ ದಿವ್ಯಕೃಪೆಗೆ ಪಾತ್ರರಾಗಬೇಕು.

ಸ್ವಾಮಿ ವೇದಾಂತದೇಶಿಕರು ತಮ್ಮ ಸ್ತೋತ್ರಗ್ರಂಥಗಳ ಸರಮಾಲೆಯಲ್ಲಿ ವಿಶಿಷ್ಟವಾದ ಕೃತಿಯಾದ ಯತಿರಾಜಸಪ್ತತಿಯ ''ನಿರಾಲೋಕೇ'' ಎಂಬ ಶ್ಲೋಕದಲ್ಲಿ ''ಆಚಾರ್ಯರುಗಳು ದೀಪಸದೃಶರು'' ಎಂಬುದನ್ನು ಉಲ್ಲೇಖಿಸಿದ್ದಾರೆ. ಭಗವತ್ಪಾದ ಶಂಕರರು, ಭಗವದ್ರಾಮಾನುಜರು ಮತ್ತು ಪರಮಭಾಗವತರಾದ ಮಧ್ವರು ಎಂಬ ತ್ರಿವೇಣೀ ಮಹಾಮಹಿಮರೆಂಬ ದಿವ್ಯ ಜ್ಯೋತಿಯು ಈ ಲೋಕದಲ್ಲಿ ಅವತರಿಸದೇ ಇದ್ದಿದ್ದರೆ, ಈ ಲೋಕದ ಗತಿ ಏನಾಗುತ್ತಿತ್ತೋ ? ಏನೋ? ಲೋಕವೆಲ್ಲವೂ ಕುಯುಕ್ತಿಗಳಿಗೆ ಹೆಸರಾದ ದುಷ್ಟ ಜಂತುಗಳಿಂದ ಬಂದ ದುಷ್ಟ ಮತಗಳಿಗೆ ಬಲಿಯಾಗಿ ಪಾತಾಳದ ಬೊಂತೆಯಲ್ಲಿ ಬಿದ್ದು ತೊಳಲಾಡಬೇಕಾಗುತ್ತಿತ್ತು. ಆದ್ದರಿಂದ ಆಚಾರ್ಯರುಗಳು ಅವತರಿಸದೇ ಇದ್ದಿದ್ದರೆ, ಸುಜ್ಞಾನವನ್ನು ಪಡೆದು ಬಾಳಲಾಗುತ್ತಿರಲಿಲ್ಲ ಎಂಬುದು ಸ್ಪಷ್ಟ.

ಪಾಪಿಷ್ಠಃ ಕ್ಷತ್ರಬಂಧುಶ್ಚ
ಪುಂಡರೀಕಶ್ಚ ಪುಣ್ಯಕೃತ್
ಆಚಾರ್ಯ ವತ್ತಯಾ ಮುಕ್ತೌ
ತಸ್ಮಾದಾಚಾರ್ಯವಾನ್ ಭವೇತ್

ಎಂಬುದಾಗಿ ವಿಷ್ಣುಧರ್ಮದಲ್ಲಿ ಪ್ರಮಾಣ ಪುರಸ್ಸರವಾಗಿ ಸ್ಪಷ್ಟಪಡಿಸಿದೆ. ಮಹಾಪಾಪಿಯಾದ ಕ್ಷತ್ರಬಂಧು ಮತ್ತು ವಿಶೇಷ ಪುಣ್ಯಭಾಜನನಾದ ಪುಂಡರೀಕನು, ಇವರಿಬ್ಬರೂ ಸದ್ಗತಿ ಹೊಂದಲು

ಅವರ ಪುಣ್ಯಪಾಪಗಳು ಅನುಕೂಲಕರ ವಾಗಿರಲಿಲ್ಲ. ಅವರಿಬ್ಬರೂ ಆಚಾರ್ಯರು ಗಳನ್ನು ಆಶ್ರಯಿಸಿಯೇ ಸದ್ಗತಿ ಪಡೆದರು ಆದ್ದರಿಂದ ಆಚಾರ್ಯರುಗಳು ಇಲ್ಲಿ ಅವತರಿಸದಿದ್ದರೆ ನಾವು ಸದ್ಗತಿ ಪಡೆಯಲು ಸಾಧ್ಯವೇ ಇಲ್ಲವೆಂಬುದು ಲೋಕಕ್ಕೆ ಸೂರ್ಯನು ಬೆಳಕುಕೊಡುವಷ್ಟೇ ಸತ್ಯ.

ಜನ್ಮ ಪಡೆದಂದಿನಿಂದಲೇ ಮಗುವಿಗೆ ಮಾತಾಪಿತರು ಹಾಗೂ ಮತ್ತಿತರ ಕುಟುಂಬದ ಸದಸ್ಯರು - ಇವರು ಅಪ್ಪ, ಅಮ್ಮ, ಅಜ್ಜ, ಅತ್ತೆ ಅಣ್ಣ, ತಮ್ಮ, ಸೋದರಮಾವ, ಇದು ಕುದುರೆ, ಹಸು, ಆನೆ, ಹುಲಿ, ಸಿಂಹ, ಅದು ಕಾರು, ಮನೆ, ಶಾಲೆ, ಆಲಯ, ಗಿಡ, ಮರ-ಇವೇಮೊದಲಾದ ಸಕಲ ವಿಧವಸ್ತುಗಳನ್ನು ಮತ್ತು ಒಬ್ಬೊಬ್ಬರನ್ನೂ-ತೋರಿಸಿ, ಮುಟ್ಟಿನೋಡಿ, ಶಬ್ದಗಳ ಮೂಲಕ, ಪುಸ್ತಕ ಮತ್ತು ಚಿತ್ರಗಳ ಮೂಲಕ ಕಲಿಸಿಕೊಡುವರು, ನಡವಳಿಕೆಯನ್ನು ತೋರಿಸಿಕೊಡುವರು. ಮಗುವು ಕ್ರಮ ಕ್ರಮವಾಗಿ ಒಂದೊಂದನ್ನೂ, ತಿಳಿದು ಪ್ರಪಂಚಜ್ಞಾನವನ್ನು ತನ್ನದಾಗಿಸಿಕೊಳ್ಳಲು ಮುಂದಾಗಿ ಪರಿಪೂರ್ಣತೆಯನ್ನು ಪಡೆಯುವುದು.

ಪ್ರಯೋಗಾರ್ಥವಾಗಿ, ಒಂದುಸಲ, ವಿದೇಶದಲ್ಲಿ ನೂರಾರು ಮಕ್ಕಳನ್ನು ಅವು ಹುಟ್ಟಿದ ಕೆಲವು ತಿಂಗಳ ನಂತರ ಒಂದು ಕೊಠಡಿಯಲ್ಲಿ ಕೂಡಿಹಾಕಿದರು. ಆಹಾರ ಕೊಡುವ ವೇಳೆ ಮತ್ತು ಜಲಮಲ ಶುದ್ಧೀಕರಣದ ವೇಳೆಯಲ್ಲಿ ಮಾತ್ರ ಒಂದಿಬ್ಬರು ಹೋಗಿ ಗಮನಿಸಿ ಹೊರ ಬರುತ್ತಿದ್ದರು, 3-4 ವರ್ಷಗಳ ನಂತರ ಹೋಗಿ ನೋಡಿದಾಗ ಒಂದೊಂದು ಮಗುವೂ, ಆಡು, ಕುರಿ, ನಾಯಿ ಮುಂತಾದ ಪ್ರಾಣಿಗಳಂತೆ ಅರಚುತ್ತಿದ್ದುವೇ ಹೊರತು, ಒಂದು ಮಗುವಿನಿಂದಲಾದರೂ ಅಪ್ಪ, ಅಮ್ಮ, ಅಜ್ಜಿ, ಮನೆ ಮಠ ಇತ್ಯಾದಿಯಾಗಿ ಒಂದು ಶಬ್ದವೂ ಕೇಳಿಬರಲಿಲ್ಲವಂತೆ ಹಾಗೂ ತಾಯಿಯ ಸ್ತನ್ಯಪಾನದ ಮತ್ತು ಸಹವಾಸದ ಸಂಪರ್ಕವಿಲ್ಲದಿದ್ದಕಾರಣ ದೇಹದ ಬೆಳವಣಿಗೆಯೂ ಸಮರ್ಪಕವಾಗಿರಲಿಲ್ಲವಂತೆ. ಈ ರೀತಿಯಾಗಲು ಕಾರಣವೇನು? ಮಾತಾಪಿತರು ಆಚಾರ್ಯಸ್ಥಾನದಲ್ಲಿದ್ದು ಒಂದೊಂದು ವಸ್ತುವನ್ನೂ ಇದು ಇಂತಹವೆಂದು ಹೇಳಿ, ಕಲಿಸಿಕೊಟ್ಟಿದ್ದರೆ ಆ ಮಕ್ಕಳಿಗೆ ಬುದ್ಧಿ ಶಕ್ತಿಯು ಬೆಳೆದು, ಪ್ರಾಪಂಚಿಕ ಜ್ಞಾನವನ್ನು ಪಡೆಯುತ್ತಿತ್ತು. ಅದು ಇಲ್ಲದಿದ್ದ ಕಾರಣ ದಿಂದಲೇ ಆ ಮಕ್ಕಳು ಪ್ರಾಣಿಗಳಿಗಿಂತಲೂ ಕೀಳಾಗಿ ಆಗಿದ್ದವು. ಆದ್ದರಿಂದ ನಮಗೆ ಜನ್ಮಪಡೆದಂದಿನಿಂದಲೇ ಮೊದಲ ಆಚಾರ್ಯರು ಮಾತಾಪಿತರೇ ಆಗುವರು. ಇದನ್ನೇ ''ಮಾತೃದೇವೋಭವ, ಪಿತೃ ದೇವೋಭವ, ಆಚಾರ್ಯದೇವೋ ಭವ......'' ಇವೇ ಮುಂತಾಗಿ ಸ್ಪಷ್ಟೀಕರಿಸಿದೆ. ಆದ್ದರಿಂದ ಮತ್ತಾರಿಗೂ ಇರದ ಅಕ್ಕರೆ, ಆದರಣೆ, ಜವಾಬ್ದಾರಿ, ಕರ್ತವ್ಯ ಮತ್ತು ಹೊಣೆಯನ್ನು ಹೊತ್ತು ತಾವು ಹಡೆದ ಮಗುವಿಗೆ ಸಕಲ ವಿಧವಾದ ಪ್ರಪಂಚಜ್ಞಾನವನ್ನು ಕೊಟ್ಟು ಸಮಾಜದ ಒಂದು ಉತ್ತಮ ಪ್ರಜೆಯನ್ನಾಗಿ ರೂಪಿಸುವ ರುವಾರಿಗಳೇ ಮಾತಾಪಿತ ರಾಗುವರು.

ಆಚಾರ್ಯ, ದೇಶಿಕ ಇವೆಲ್ಲವೂ ಸಮಾನಾರ್ಥವನ್ನು ಕೊಡುವಂತಹ ಪದಗಳು. ನಮಗೆ ಸನ್ಮಾರ್ಗವನ್ನು ತೋರುವವರನ್ನು ಆಚಾರ್ಯ ಅಥವಾ ದೇಶಿಕರೆಂದು ನಿರ್ದೇಶಿಸುವರು, ಇಂತಹ ಜ್ಞಾನ, ವೈರಾಗ್ಯ, ಸ್ವಾನುಷ್ಠಾನಾದಿ ಪರರಾಗಿ ಇರುವ ಮಹಾಮಹಿಮರನ್ನು ನಾವು ಪಡೆಯಬೇಕು. ಅವರೇ ಆಚಾರ್ಯರು. ಸುಜ್ಞಾನವನ್ನು ಬೋಧಿಸುವ ಆಚಾರ್ಯರುಗಳು ಅವತರಿಸ ದಿದ್ದರೆ ಅಜ್ಞಾನಿಗಳಾದ ನಾವು ಏನು ತಾನೇ ಮಾಡಲಾದೀತು? ಆದ್ದರಿಂದ ಆಚಾರ್ಯರ ಅವತಾರವು ಅತ್ಯಂತ ಅವಶ್ಯಕ ಹಾಗೂ ಅನಿವಾರ್ಯ.

ನಮ್ಮ ಹುಟ್ಟಿಗೆ ಸಾರ್ಥಕ್ಯವನ್ನು ಕೊಡಿಸಿಕೊಡಲು ಅವತರಿಸಿದ ಆಚಾರ್ಯರು ನಮಗೆ ಮಾಡುವ ಉಪಕಾರಗಳು ಅಗಣಿತ ಹಾಗೂ ಅನಂತ, ಸ್ವಾಮಿ ದೇಶಿಕರ ಅನ್ಯಾದೃಶ ಕೃತಿಯಾದ ''ನ್ಯಾಸ ವಿಂಶತಿ'' ಯಲ್ಲಿ ಆಚಾರ್ಯರು ಮಾಡುವ ಉಪಕಾರಗಳನ್ನು ಒಂದು ವಿಧವಾಗಿ ಲೆಕ್ಕಹಾಕಲ್ಪಟ್ಟು ದೇವ ರಂತೆಯೇ ಆಚಾರ್ಯರುಗಳನ್ನು ಪೂಜಿಸಬೇಕು, ಭಕ್ತಿಯೆಂಬ ಕುಸುಮವನ್ನು ಅವರ ಪಾದಾರವಿಂದಗಳಿಗೆ ಮುಡಿಸಬೇಕು ಎಂದು ಘೋಷಿಸಿದ್ದಾರೆ.

1) ಆಚಾರ್ಯರು ಶಿಷ್ಯರುಗಳಿಗೆ ಸದುಪದೇಶಕೊಟ್ಟು ಅಜ್ಞಾನವನ್ನು ಹೋಗ ಲಾಡಿಸುವರು.

2) ಎಂತಹ ಘೋರ ಪಾಪಿಗಳಾದ ಶಿಷ್ಯರಾಗಿದ್ದರೂ ಕೂಡ ಅವರ ಶರೀರ ಮತ್ತು ಆತ್ಮವನ್ನು ಪರಿಶುದ್ಧಗೊಳಿಸಿ ಅವರ ಸರ್ವ ಪಾಪಗಳನ್ನು ಹೋಗಲಾಡಿಸುವರು.

3) ಜ್ಞಾನ, ಗುಣ, ಅನುಷ್ಠಾನ ಮುಂತಾದವುಗಳಲ್ಲಿ ತನ್ನಂತೆಯೇ ತನ್ನ ಶಿಷ್ಯರನ್ನು ತಯಾರು ಮಾಡುವರು.

4) ತತ್ತ್ವ ವಿಷಯಕವಾಗಿ ವಿಶೇಷ ಜ್ಞಾನವನ್ನು ಬೋಧಿಸಿ ಶಿಷ್ಯರನ್ನು ತತ್ತ್ವಜ್ಞಾನಿ ಗಳನ್ನಾಗಿ ಮಾಡುವರು.

5) ದುರ್ಗುಣಗಳಿಂದ ಕೂಡಿದ ಶಿಷ್ಯರನ್ನು ಸದ್ಗುಣ ಸಂಪನ್ನರನ್ನಾಗಿ ಸದ್ಗತಿ ಪಡೆಯುವಂತೆ ಮಾಡುವರು.

6) ಶಿಷ್ಯರುಗಳಲ್ಲಿ ಹೃದಯ ಪೂರ್ವಕ ಪ್ರೀತಿ, ದಯೆ, ವಾತ್ಸಲ್ಯಾದಿಗಳನ್ನು ತೋರುವರು.

7) ಇಹಪರ ಸೌಖ್ಯಗಳೆರಡಕ್ಕೂ ಏಣಿಯಂತಿದ್ದು ಶಿಷ್ಯರನ್ನು ಸಂಪೂರ್ಣವಾಗಿ ಇಂತಹ ಪರೋಪಕಾರ ಮಾಡುವ ಆಚಾರ್ಯರು ''ಅತ್ರ ಪರತ್ರಚಾಪಿ'' ಎಂಬ ರೀತಿಯಲ್ಲಿ ಇಹಪರಗಳೆರಡರಲ್ಲಿಯೂ ನಮಗೆ ಪ್ರತ್ಯಕ್ಷದೇವರಾಗಿಯೇ ಬೆಳಗುವರು. ಆಚಾರ್ಯರುಗಳು ನಮ್ಮ ಮೇಲೆ ಕೃಪಾಕಟಾಕ್ಷಬೀರಿ ಅರ್ಥಪಂಚಕ, ತತ್ತ್ವತ್ರಯ ಮೊದಲಾದ ಗಹನವಾದ ಶಾಸ್ತ್ರಗಳನ್ನು ಉಪದೇಶಿಸುವರು. ಈ ರೀತಿ ಉಪದೇಶಪಡೆದ ನಾವು ಗರ್ಭವಾಸದಿಂದ ಹೊರಬಂದು, ನಮಗೆ ಎದುರಾಗುವ ನಾನಾವಿಧ ಕಷ್ಟ ಹಾಗೂ ಕ್ಲೇಶದಿಂದ ಬಿಡುಗಡೆ ಹೊಂದಿ ಭಗವಂತನ ದಿವ್ಯ ಪಾದಾರವಿಂದಗಳಲ್ಲಿ ಅನನ್ಯವಾದ ಕೈಂಕರ್ಯ ಗಳನ್ನು ಮಾಡುವಂತಹ ಅರ್ಹತೆಯನ್ನು

ಪಡೆಯುವೆವು. ಆಚಾರ್ಯರುಗಳ ಕೃಪಾಕಟಾಕ್ಷವಿಲ್ಲದಿದ್ದರೆ ಮೇಲ್ಕಂಡವುಗಳನ್ನು ನಾವು ಪಡೆಯಲು ಸಾಧ್ಯವಿರುವುದಿಲ್ಲ.

ತಿರುವುಡನ್ ವಂದ ಶೆಳುಮಣಿ ಪೋಲ್
ತಿರುಮಾಲ್ ಇದಯಂ
ಅರುವಿಡಮನ್ನಿ ಮಲರಡಿ ಚೂಡುಂ
ವಹೈ ಪೆರುನಾಮ್
ಕರುವುಡನ್ ವಂದ ಕಡುವಿನ್ನೆ
ಯಾಟ್ರಿಲ್ ವಿಳುಂದೊಳುಹಾದು
ಅರುವುಡೈನ್ನೆಂದರಿವಾರ್
ಅರುಳ್ ಚೈರ್ಯವಮ್ಮೆಂದನರೇ

ಎಂಬ ಸ್ವಾಮಿ ದೇಶಿಕರ ದಿವ್ಯವಾಣಿಯು ಇಲ್ಲಿ ಗಮನಾರ್ಹವಾದುದು.

ಚೇತನರಿಗೆ ಸರ್ವೇಶ್ವರನು ರಾಮ, ಕೃಷ್ಣ ಇತ್ಯಾದಿಯಾಗಿ ಹಲವು ಅವತಾರಗಳನ್ನು ಎತ್ತಿ ದುಷ್ಟ ಶಿಕ್ಷಣ, ಶಿಷ್ಟಪರಿಪಾಲನೆ, ಧರ್ಮ ಸಂಸ್ಥಾಪನೆಯನ್ನು ಮಾಡಿರುವುದ ರೊಂದಿಗೆ ಸದುಪದೇಶವನ್ನೂ ಕೊಟ್ಟಿರುವನು. ಆದರೆ ಈ ಉಪದೇಶಗಳು ಅಷ್ಟು ಫಲಕಾರಿಯಾಗಲಿಲ್ಲ.

ರಾವಣನಿಗೆ ಶ್ರೀರಾಮನು, ''ನ ಚೇತ್ ಶರಣ ಮಭ್ಯೈಷಿ ಮಾಮುಪಾದಯ ಮೈಥಿಲೀಮ್'' - ''ಸೀತೆಯನ್ನು ನನ್ನಲ್ಲಿ ಒಪ್ಪಿಸಿ ನನ್ನಲ್ಲಿ ಶರಣು ಹೊಂದದಿದ್ದರೆ ನಿನ್ನನ್ನು ನಾನು ಬಿಡುವುದಿಲ್ಲ'' ಎಂದು ಶರಣಾಗತಿ ಶಾಸ್ತ್ರವನ್ನು ಹಲವಾರು ಪ್ರಕಾರವಾಗಿ ಉಪದೇಶಿಸುವನು. ಆದರೂ ''ತಂ ಮನ್ಯೇ ರಾಘವಂ ವೀರಂ ನಾರಾಯಣ ಮನಾಮಯಮ್'' ಸಾಕ್ಷಾತ್ ನಾರಾಯಣನೇ ರಾಮನಾಗಿ ಅವತರಿಸಿರುವನು ಎಂದು ರಾಮನನ್ನು ಚೆನ್ನಾಗಿ ತಿಳಿದು ಕೊಂಡಿದ್ದರೂ ಸಹ ರಾವಣನು ರಾಮನ ಮಾತನ್ನು ಕೇಳಲಿಲ್ಲ.

ಪರಂಧಾಮನಾದ ಶ್ರೀಕೃಷ್ಣನೂ ಸಹ ನಾನು ಚೇತನರಿಗೆ ಎಷ್ಟೋ ಉನ್ನತವಾದ ಉಪದೇಶಗಳನ್ನು ಹಲವಾರು ಸಂದರ್ಭಗಳಲ್ಲಿ ಕೊಟ್ಟರೂ ಅದನ್ನು ಜನಗಳು ಕೇಳಲಿಲ್ಲವಲ್ಲ! ನನ್ನನ್ನು ಒಬ್ಬ ಸಾಮಾನ್ಯ ಮನುಷ್ಯನಾಗಿಯೇ ಭಾವಿಸಿ ನನ್ನ ಉಪದೇಶಗಳನ್ನು ಅಲಕ್ಷಿ ಸುತ್ತಿರುವರಲ್ಲ. ಏನು ಮಾಡಲಿ? ಎಂದು ತನ್ನನ್ನು ತಾನೇ ನಿಂದಿಸಿಕೊಳ್ಳುವನು. ಈ ಮೂಲಕ ಸಾಕ್ಷಾತ್ ಭಗವಂತನ ನೇರವಾದ ಉಪದೇಶಗಳು ಫಲಕಾರಿಯಾಗಲಿಲ್ಲವೆಂಬುದು ಸಿದ್ಧವಾಯಿತು.

ಆಚಾರ್ಯ ಸಂಬಂಧವನ್ನು ಹೊಂದ ದವರನ್ನು ಸರ್ವೇಶ್ವರನೂ ಸಹ ದೂರ ಮಾಡುವನು. ಗುಹನು ರಾಮನಲ್ಲಿ ಅನನ್ಯ ಭಕ್ತಿಯುಳ್ಳವನು. ರಾಮನಿಗೆ ಗುಹನು ಹಲವಾರು ಬಗೆಯ, ಅಪರೂಪದ, ಸುಮಧುರ ಹಣ್ಣುಹಂಪಲಗಳನ್ನು ಸಮರ್ಪಿಸುವನು. ಆದರೆ ಶ್ರೀರಾಮನು ಅರಸಕುಲದಲ್ಲಿ ಹುಟ್ಟಿದ ನಾನು ನನಗಾಗಿ ಯಾವುದನ್ನೂ (ದಾನವಾಗಿ) ತೆಗೆದುಕೊಳ್ಳಲು ಅಧಿಕಾರವಿರುವುದಿಲ್ಲ ಕೊಡಲು ಮಾತ್ರ ಅಧಿಕಾರವಿದೆ ಎಂದು ಹೇಳಿ, ತಿರಸ್ಕರಿಸುವನು. ಆದರೆ ಅದೇ ಶ್ರೀರಾಮನು ಮಹಾಸಾಧ್ವೀ ಶಬರಿಯು ಕೊಟ್ಟ ಉಪಹಾರಗಳನ್ನು ಅತ್ಯಂತ ಪ್ರೀತಿಯಿಂದ ಸ್ವೀಕರಿಸುವನು. ಅವಳಿಗೆ ಯಾವುದೇ ರೀತಿಯಲ್ಲಿ ಪ್ರತಿಯಾಗಿ ಮಾತನಾಡುವುದಿಲ್ಲ. ಏಕೆಂದರೆ, ಶಬರಿಯು ಮತಂಗಮುನಿಯ ಆಶ್ರಮದಲ್ಲಿದ್ದುಕೊಂಡು ಅಲ್ಲಿರುವ ಮುನಿ ಜನರೆಲ್ಲರಿಗೂ ಸೇವೆಗೈದು ಆಚಾರ್ಯ ಅನುಗ್ರಹ ಭಾಜನಳಾಗಿ ತನ್ನ ಮನ ಹಾಗೂ ತನ್ನ ಮನೆಯಲ್ಲಿರುವ ಕೊಳೆಯನ್ನು ತೊಳೆದು ಕೊಂಡಿದ್ದವಳು. ಆದಕಾರಣ ರಾಮನು ಶಬರಿಯಲ್ಲಿ ಅತ್ಯಂತ ಪ್ರೀತಿ ವಾತ್ಸಲ್ಯವನ್ನು ತೋರಿ ಅವಳಿಂದ ಪಡೆದ ಹಣ್ಣನ್ನು ಭುಜಿಸಿ ಶಬರಿಯನ್ನು ಅನುಗ್ರಹಿಸಿದನು.

ಕಮಲಂ ಸಲಿಲಾऽಪೇತಂ
ಶೋಷಯತಿ ರವಿಃ
ನ ತೋಷಯತ್ಯೇವ

ಎಂಬುದು ಒಂದು ಪ್ರಸಿದ್ಧಪ್ರಮಾಣವಾಕ್ಯ. ಕೆರೆ, ಕೊಳ ಇತ್ಯಾದಿ ನೀರಿನಲ್ಲಿರುವ ತಾವರೆ ಪುಷ್ಪವನ್ನು ವಿಕಸಿಸುವಂತೆ ಮಾಡುವವನು ಸೂರ್ಯನು. ಮುದುಡಿದ ತಾವರೆಯು ಸೂರ್ಯನ ಕಿರಣ ಬಿದ್ದಮೇಲೆಯೇ ಅರಳುವುದು. ಅದೇ ತಾವರೆ ಪುಷ್ಪವು ನೀರಿನಿಂದ ಬೇರ್ಪಟ್ಟಾಗ ಅದನ್ನು ಕೂಡಲೇ ಒಣಗಿಸಿ ಬಿಡುವವನೂ ಸೂರ್ಯನೇ.

ಇದನ್ನೇ ಲೋಕಾಚಾರ್ಯರೆಂದು ಪ್ರಸಿದ್ಧರಾದ ಪಿಳ್ಳೈ ಲೋಕಾಚಾರ್ಯರು ತಮ್ಮ ಅಮೂಲ್ಯ ಕೃತಿಯಾದ ಶ್ರೀವಚನ ಭೂಷಣ ಮಹಾಗ್ರಂಥದಲ್ಲಿನ ಚತುರ್ಥ ಪ್ರಕರಣದಲ್ಲಿ ಆಚಾರ್ಯರ ದಿವ್ಯ ಲಕ್ಷಣಗಳನ್ನು ವರ್ಣಿಸುತ್ತಾ-

ತಾಮರೈಯೈಯಲರ್ತುಕ್ಕಡವ
ಆದಿತ್ಯನ್ ತಾನೇ ನೀರೈ ಪ್ಪಿರಿಂದಾಲ್
ಅತ್ತೈಯ ಲರ್ತು ಮಾಪ್ಪೋಲೇ
ಸ್ವರೂಪ ವಿಕಾಸತ್ತೈ ಪಣ್ಣು ಮೀಶ್ವರನ್,
ತಾನೇ ಆಚಾರ್ಯ ಸಂಬಂದಂ
ಕುರೈಂದಾಲ್ ಅತ್ತೈ ವಾಡಪ್ಪಣ್ಣುಂ (438)

ನೀರಿನಲ್ಲಿರುವ ಕಮಲವನ್ನು ಹೇಗೆ ಸೂರ್ಯನು ವಿಕಾಸಗೊಳಿಸುವನೋ ಹಾಗೆಯೇ ನೀರಿನಿಂದ ಸಂಬಂಧ ಕಳೆದುಕೊಂಡ ಅದೇ ಕಮಲವನ್ನು ಬಾಡಿಸುವನು. ಅದೇರೀತಿ ಭಗವಂತನೂ ಕೂಡ ಆಚಾರ್ಯ ಸಂಬಂಧ ವಿರುವವರನ್ನು ಸ್ವೀಕರಿಸುವನು ಆಚಾರ್ಯ ಸಂಬಂಧವಿಲ್ಲದ ಪಕ್ಷದಲ್ಲಿ ಆ ಚೇತನನನ್ನು ಕೈಬಿಡುವನು ಎಂದು ಘೋಷಿಸಿದ್ದಾರೆ.

ಭಗವಂತನು ಅವತರಿಸಿ ಹಲವಾರು ಸದುಪದೇಶಗಳನ್ನು ಮಾಡಿದ್ದಾಗ್ಯೂ, ಮೋಕ್ಷಾಂತವಾದ ಐಶ್ವರ್ಯಗಳಲ್ಲಿ ಚೇತನರಿಗೆ ಅಭಿರುಚಿ ಹುಟ್ಟುವುದೆಂದು ಹೇಳಲಾಗುವುದಿಲ್ಲ. ಗೀತೆಯ ವಿಶ್ವರೂಪಾಧ್ಯಾಯದಲ್ಲಿ ಹೇಳಿರು ವಂತೆ ಕೃಷ್ಣನ ವಿರಾಟ್ ಸ್ವರೂಪವನ್ನು ಚೆನ್ನಾಗಿ ದರ್ಶಿಸಿದ ಮೇಲೂ ಅರ್ಜುನನು ಮೋಕ್ಷದಲ್ಲಿ ಅಭಿಲಷಿತನಾಗದೇ ರಾಜ್ಯಸುಖದಲ್ಲೇ ತನ್ನ ಆಸೆಯನ್ನು ಪ್ರಕಟಿಸುವನು. ಆದಕಾರಣ, ಈಶ್ವರನ ಸಂಬಂಧವು, ಒಂದು ಸಮಯ ಕೆಲವರಿಗೆ ಮೋಕ್ಷಕ್ಕೆ ಕಾರಣವಾಗಬಹುದು. ಬಂಧನಕ್ಕೂ ಕಾರಣವಾಗಬಹುದು. ಅಥವಾ ಮೋಕ್ಷಕ್ಕೇ ಕಾರಣವಾಗುವುದೆಂದು ನಿರ್ಧಾರವಾಗಿಯೂ ಹೇಳುವಂತಿಲ್ಲ. ಆದರೆ, ಆಚಾರ್ಯರ ಸಂಬಂಧವನ್ನು ಪಡೆದ ಸಕಲರೂ ಮೋಕ್ಷವನ್ನು ಪಡೆಯಲು ಪೂರ್ಣಸಾಧ್ಯತೆಯಿದೆ. ಈಶ್ವರಸಂಬಂಧವು ಬಂಧ, ಮೋಕ್ಷಾದಿ ಗಳೆರಡಕ್ಕೂ ಸಮಾನವಾಗಿರುತ್ತದೆ. ಆದರೆ ಆಚಾರ್ಯ ಸಂಬಂಧವು ಮೋಕ್ಷಕ್ಕೆ ಮಾತ್ರ

ಹೇತುವಾಗಿರುವುದು ಎಂಬುದು ಸಿದ್ಧವಾಯಿತು. ಆದ್ದರಿಂದ ಈಶ್ವರನ ಅವತಾರಗಳ ಮಾತ್ರದಿಂದಲೇ ಚೇತನರಿಗೆ ಉಪದೇಶಕ್ಕೂ, ಸದ್ಗತಿಹೊಂದುವುದಕ್ಕೂ ಪರ್ಯಾಪ್ತವಾಗದು. ಮೇಲೆ ತಿಳಿಸಿದ ಕೆಲವು ಕಾರಣಗಳಿಂದಲೇ ಈಶ್ವರನಿಗಿಂತ ಆಚಾರ್ಯರೇ ಶ್ರೇಷ್ಠರಾದವರು ಎಂಬುದು ಸಿದ್ಧವಾದಂತಾಯಿತು.

''ಆಚಾರ್ಯಾದಿಹ ದೇವತಾಂ ಸಮಧಿಕಾಂ ಅನ್ಯಾಂ ನ ಮನ್ಯಾಮಹೇ'' ಎಂಬ ಸ್ವಾಮಿ ವೇದಾನ್ತದೇಶಿಕರ ಮಹದ್ಗ್ರಂಥವಾದ ರಹಸ್ಯತ್ರಯಸಾರದಲ್ಲಿನ ದಿವ್ಯವಾಣಿಯ ಮೂಲಕ - ವೇದ ಮೊದಲಾದವುಗಳಲ್ಲಿ ಪರದೇವತೆ ಯೆಂದು ಪ್ರಕಾಶಿಸಲ್ಪಡುವ ಶ್ರೀಮನ್ನಾರಾಯಣ ನನ್ನು ಆಚಾರ್ಯರು ಗಳಿಗಿಂತ ಉತ್ತಮ ದೇವತೆಯೆಂದು ಪರಿಗಣಿಸಲಾಗುವುದಿಲ್ಲ ಎಂದು ಶಪಥಮಾಡಿ ನಿಷ್ಕರ್ಷಿಸಿದ್ದಾರೆ.

ಆಚಾರ್ಯರುಗಳು ಸರ್ವದಾ ತಮ್ಮನ್ನು ಅರಸಿ ಬಂದ ಶಿಷ್ಯರುಗಳನ್ನು ಪರಿಪೂರ್ಣವಾಗಿ ಅನುಗ್ರಹಿಸಬೇಕೆಂಬುದೇ ಅವರ ದೃಢವ್ರತ. ದಯೆಯೇ ಅವರಿಗೆ ನಿರುಪಾಧಿಕವಾದುದು. ದೇವದೇವನ ಪಟ್ಟ ಮಹಿಷಿಯಾದ ಮಹಾಲಕ್ಷ್ಮಿಯ ಅವತಾರವನ್ನು ಆಚಾರ್ಯಾವ ತಾರವೆಂದು ಪರಿಗಣಿಸಲಾಗಿದೆ. ತನ್ನ ಪಟ್ಟಮಹಿಷಿಯ ಮಾತನ್ನು ಎಂದೂ ಉಲ್ಲಂಘಿಸಲಾರದ ಭಗವಂತನಿಗೆ ಆಚಾರ್ಯ ಸ್ಥಾನವನ್ನಲಂಕರಿಸಿರುವ ಮಹಾ ಲಕ್ಷ್ಮಿಯು ಚೇತನರಿಗೆ ಮೋಕ್ಷವನ್ನು ಅನುಗ್ರಹಿಸಲು ಒತ್ತಾಯ ಮಾಡುವಳು. ಮಹಾಲಕ್ಷ್ಮಿಗೆ ಹೇಗೆ ಕೋಪ, ತಾಪ, ಈರ್ಷೆ, ದ್ವೇಷ, ಅಸೂಯೆ ಅಹಂಕಾರಾದಿಗಳು ಇಲ್ಲದಿರುವುದೋ ಅದರಂತೆಯೇ ಆಚಾರ್ಯರುಗಳಿಗೂ ಅರಿಷಡ್ವರ್ಗಗಳು ಇರಲು ಪ್ರಸಕ್ತಿಯೇ ಇರುವುದಿಲ್ಲ. ಇವೆಲ್ಲದರಿಂದ ಅತೀತರಾದವರೇ ಆಚಾರ್ಯರುಗಳು.

ಈಶ್ವರನು ನಿಗ್ರಹ ಮತ್ತು ಅನುಗ್ರಹ ಇವೆರಡಕ್ಕೂ ಶಕ್ತನು. ಈಶ್ವರನ ಉಪದೇಶವು ತಕ್ಷಣವೇ ಮರೆತುಹೋಗಬಹುದು. ಆದರೆ ಆಚಾರ್ಯೋಪದೇಶವು ಸ್ಥಿರವಾದುದು. ತನ್ನ ವಿಶ್ವರೂಪವನ್ನು ಕಾಣಲು ಆಸೆಪಟ್ಟ ಅರ್ಜುನನಿಗೆ ದಿವ್ಯಚಕ್ಷುಸ್ಸನ್ನು ಕೃಷ್ಣನು ಅನುಗ್ರಹಿಸುವನು. ಅರ್ಜುನನು ಆ ದಿವ್ಯನೇತ್ರದಿಂದ, ಅಸದೃಶ, ಅದ್ಭುತ, ಅಪೂರ್ವವಾದ ದಿವ್ಯಸ್ವರೂಪವನ್ನು ದರ್ಶಿಸಿ, ಭಯಪಟ್ಟು ಕೂಡಲೇ ಹಿಂದಿನ ಸ್ವರೂಪಕ್ಕೆ ಬಂದು ಸೇವೆ ಕೊಡೆಂದು ಪರಿಪರಿಯಾಗಿ ಕೃಷ್ಣನಲ್ಲಿ ಬೇಡಿಕೊಂಡನು. ಆದರೆ ವ್ಯಾಸರೆಂಬ ಮಹಾನ್ ಆಚಾರ್ಯರ ಮೂಲಕವಾಗಿ ದಿವ್ಯನೇತ್ರವನ್ನು ಪಡೆದ ಸಂಜಯನು, ಭಗವಂತನ, ಆ ಅನಂತರೂಪವನ್ನು ದರ್ಶಿಸಿ, ವಿಚಲಿತನಾಗದೇ ಮತ್ತೂ ಅಧಿಕವಾದ ಸಂತೋಷಪಟ್ಟವನಾಗಿ, ಕೃತಕೃತ್ಯತೆಯನ್ನು ಪಡೆದನೆಂದು ಧೃತರಾಷ್ಟ್ರನಿಗೆ ಹಾಗೂ ವ್ಯಾಸಮಹರ್ಷಿಗೆ ಕೃತಜ್ಞತೆಯನ್ನು ಸಲ್ಲಿಸುತ್ತಾ, ಅರಮನೆಯಲ್ಲಿ ಕುಳಿತುಕೊಂಡು ಕುರುಕ್ಷೇತ್ರ ಮಹಾಯುದ್ಧದ ಪ್ರಾರಂಭದಿಂದ ಅಂತ್ಯದವರೆಗೆ ರಣರಂಗದಲ್ಲಿ ನಡೆಯುವ ಒಂದೊಂದು ಪ್ರಸಂಗವನ್ನೂ ಯಥಾವತ್ತಾಗಿ ಅಂಧರಾಜ ಧೃತರಾಷ್ಟ್ರನಿಗೆ ತನ್ನ ದಿವ್ಯನೇತ್ರದ ಮೂಲಕ ತಿಳಿಸುವ ಅಪೂರ್ವವಾದ ಶಕ್ತಿ ಪಡೆದಂತಾವ ನಾದನು. ಭಗವಂತನಿಂದ ಪಡೆದ ದಿವ್ಯನೇತ್ರವು ಅರ್ಜುನನಿಗೆ ಸಾಕಷ್ಟು ಫಲಕಾರಿಯಾಗಲಿಲ್ಲ. ಆದರೆ, ವೇದವ್ಯಾಸರಿಂದ ಪಡೆದ ಚಕ್ಷುಸ್ಸು ಅತ್ಯಂತ ವಿಶೇಷ ಫಲವನ್ನು ಕೊಟ್ಟಿತು. ಇದರಿಂದ ಆಚಾರ್ಯರ ಅನುಗ್ರಹವು ಫಲಕೊಡುವಂತೆ ಈಶ್ವರಾನುಗ್ರಹವು ಫಲಕೊಡದು ಎಂಬುದು ಸಿದ್ಧವಾಯಿತು. ಆದಕಾರಣ, ಈಶ್ವರನಿಗಿಂತ ಆಚಾರ್ಯರು ಶ್ರೇಷ್ಠರೆಂದು ಪ್ರಮಾಣ ಪುರಸ್ಸರವಾಗಿ ಸಿದ್ಧಾಂತ ಮಾಡಿದಂತಾಯಿತು.

ಸಂತ ಪುರಂದರದಾಸರ ''ಗುರುವಿನ ಗುಲಾಮನಾಗುವ ತನಕ - ದೊರೆಯದಣ್ಣ ಮುಕುತಿ'' ಎಂಬ ವಾಣಿಯೂ ಸಹ ಇಲ್ಲಿ ಅರ್ಥಪೂರ್ಣತೆಯನ್ನುಪಡೆಯುವುದು.

ಸಕಲ ಸ್ಮೃತಿ ಗ್ರಂಥಗಳೂ, ಎಲ್ಲ ಪುರಾಣಗಳೂ, ಆಳ್ವಾರರುಗಳ ದಿವ್ಯ ಪ್ರಬಂಧಗಳೂ, ಆಚಾರ್ಯರುಗಳ ಅಪೂರ್ವ ಕೃತಿಗಳೂ ಸಹ ಚೇತನರಿಗೆ ಆಚಾರ್ಯರುಗಳ ಮಹತ್ವ, ಅದರ ಅವಶ್ಯಕತೆ ಮತ್ತು ಅನಿವಾರ್ಯತೆಯ ಬಗ್ಗೆ ಆಧಾರ ಸಹಿತ ತಮ್ಮದೇ ಆದ ವೈಶಿಷ್ಟ್ಯಪೂರ್ಣ ಶೈಲಿಯಲ್ಲಿ ತಿಳಿಯ ಪಡಿಸಿವೆ.

ಕೊನೆಯದಾಗಿ, ನಮ್ಮಿಂದ ನಮ್ಮನ್ನು ತಿದ್ದಿಕೊಳ್ಳಲು ಸಾಧ್ಯವಿಲ್ಲ. ಭಗವಂತನು ಆಗಾಗ್ಗೆ ಅವತರಿಸಿ ನಮ್ಮನ್ನು ಸರಿದಾರಿಗೆ ತರಲು ಪ್ರಯತ್ನಿಸಿದರೂ ಅದು ಸಾಧ್ಯವಾಗದು. ಶಿಷ್ಯರುಗಳೇ ಎಂದರೆ ಚೇತನರೇ, ಆಚಾರ್ಯ ಸಂಬಂಧವನ್ನು ಪಡೆಯದೇ ತನ್ನ ಅಪರಿಷ್ಕೃತ ಜ್ಞಾನದಿಂದ ಗ್ರಂಥಾವಲೋಕನ ಮಾಡಿ ವಿಶೇಷ ಜ್ಞಾನವನ್ನು ಪಡೆಯಲೂ ಸಾಧ್ಯವೇ ಇಲ್ಲ. ''ಪತ್ರೇಕ್ಷಿತೋವಾ ವ್ಯರ್ಥಸ್ಯಾತ್ ಪ್ರತ್ಯು ದಾನರ್ಥತೋಭವೇತ್'' ಎಂದು ತಾನೇ ಶಾಸ್ತ್ರವು ವಿಧಿಸುವುದು.

ಆದಕಾರಣದಿಂದಲೇ ಕಾರುಣ್ಯ ಸಮುದ್ರನಾದ ಪರಮನು ಚೇತನರ ಮೇಲೆ ವಿಶೇಷ ಕಟಾಕ್ಷಬೀರಿ ಅವರ ಉಜ್ಜೀವಿಕೆಗಾಗಿ ತನಗಿಂತ ಹೆಚ್ಚಿನ ಮಹತ್ವವನ್ನು ಕೊಟ್ಟು ಕೆಲವು ಮಹಾಮಹಿಮರನ್ನು ಆಗಾಗ ಆಚಾರ್ಯರು ಗಳಾಗಿ ಅವತಾರವೆತ್ತುವಂತೆ ಮಾಡಿರುವನು. ಆದ್ದರಿಂದ ಸಕಲರೂ ಸದಾಚಾರ್ಯರನ್ನು ಹೊಂದಿ ತನ್ಮೂಲಕ ಸುಜ್ಞಾನ ಪಡೆದು ಇಹಪರಗಳೆರಡರಲ್ಲಿಯೂ ಶಾಶ್ವತವಾದವೂ, ನಿತ್ಯವೂ ಆದ ಸುಖಸಂಪದವನ್ನು ಪಡೆಯು ವಂತಾಗಿದೆಂಬುದಕ್ಕೆ ಈ ಮೇಲ್ಕಂಡ ವಿಚಾರ ಧಾರೆಯು ಪ್ರಮಾಣ ಪುರಸ್ಸರವಾದ ನಿದರ್ಶನವಾಗಿವೆ.

★★★★★


ಅಕ್ಕರಕೆ ಮೊದಲಿಗನು ಆದಿ ಭಗವಂತ.

# ಮಹರ್ಷಿ ವೇದ ವ್ಯಾಸರು

– ಡಾ॥ ಎಸ್. ಕೇಶವಮೂರ್ತಿ.

ನದಿ ಮೂಲ ಋಷಿ ಮೂಲ ಹುಡುಕಬಾರದೆಂದು ಪಂಡಿತರು ಹೇಳುತ್ತಾರೆ. ಆದರೆ ಋಷಿಗಳ ಜನ್ಮದ ಬಗ್ಗೆ ತಿಳಿದುಕೊಳ್ಳಲು ಎಲ್ಲರಿಗೂ ಆಸಕ್ತಿ ಇದ್ದೇ ಇರುತ್ತದೆ.

ವೇದವ್ಯಾಸರು ಅಂದರೆ ವೇದಗಳನ್ನು ವಿಸ್ತಾರವಾಗಿ ವಿಂಗಡಿಸಿ - ಋಗ್ವೇದ, ಯಜುರ್ವೇದ, ಸಾಮವೇದ ಮತ್ತು ಅಥರ್ವಣವೇದಗಳನ್ನು ಸಂಗ್ರಹಿಸಿ ಸಂಕಲನ ಮಾಡಿದ ಕಾರಣ ಇವರಿಗೆ ಈ ಹೆಸರಾಯಿತು. ಇಷ್ಟೇ ಅಲ್ಲ ಮಹಾಭಾರತವನ್ನು ನಮಗೆ ಕೊಟ್ಟವರು ವೇದವ್ಯಾಸರು.

ಒಂದು ದಿನ ಪರಾಶರ ಮುನಿಗಳು ಯಮುನೆಯನ್ನು ದಾಟಿ ಹೋಗಬೇಕಾದ ಪ್ರಸಂಗ ಬಂದಿತು. ಯಮುನೆಯನ್ನು ದಾಟಿಸಲು ಮತ್ಸ್ಯಗಂಧಿ ತನ್ನ ನೌಕೆಯ ಮೂಲಕ ಅನೇಕರನ್ನು ಸಾಗಿಸುತ್ತಿದ್ದಳು. ಪರಾಶರ ಮುನಿಗಳು ಅವಳ ನೌಕೆಯಲ್ಲಿ ಕುಳಿತರು. ಮತ್ಸ್ಯಗಂಧಿಯ ಸೌಂದರ್ಯವನ್ನು ನೋಡಿ ಬೆರಗಾದರು. ಅವರ ಮನಸ್ಸಿನಲ್ಲಿ ಕಾಮಾಭಿಲಾಷೆಹುಟ್ಟಿತು. ಆಗಅವರು ಹೀಗೆಂದರು

''ಮತ್ಸ್ಯಗಂಧಿ ನಿನ್ನನ್ನು ಪಡೆಯಲು ಮನಸ್ಸು ಹಾತೊರೆಯುತ್ತಿದೆ. ನೀನು ಒಪ್ಪಿದರೆ ನಿನ್ನ ಜೊತೆ ಕೂಡಲು ಇಚ್ಛಿಸುತ್ತೇನೆ.''

''ಋಷಿಗಳೇ! ಯಮುನೆಯ ಎರಡು ದಡಗಳಲ್ಲೂ ಅನೇಕ ಋಷಿ ಮುನಿಗಳು ನಮ್ಮನ್ನು ನೋಡುತ್ತಿದ್ದಾರೆ. ಹಾಗಿರುವಾಗ ನಮ್ಮ ಸಮಾಗಮ ಹೇಗೆ ಸಾಧ್ಯ?'' ಹೀಗೆಂದ ಕೂಡಲೇ ಪರಾಶರರು ತಮ್ಮ ತಪೋಬಲದಿಂದ ಮಂಜನ್ನು ಸೃಷ್ಟಿಸಿ ನೌಕೆಯನ್ನು ಯಾರೂ ನೋಡದಿರಲೆಂದು ಮಂಜಿನ ಮುಸಕನ್ನು ಹಾಕಿದರು. ದಡದಲ್ಲಿ ನಿಂತ ಯಾರೂ ಕಣ್ಣಿಗೆ ಕಾಣಿಸಲಿಲ್ಲ.

''ಋಷಿಗಳ, ನಾನು ಒಬ್ಬ ಕನ್ಯೆ. ನಿಮ್ಮ ಜೊತೆ ಸಮಾಗಮ ಮಾಡಿದರೆ ದೂಷಿತಳಾಗುವೆ. ದೂಷಿತಳಾದ ನಂತರ ನಾನು ಮನೆಗೆ ಹೇಗೆ ಹೋಗಬಲ್ಲೆ? ನಾನು ಹಾಗೆ ಹೋದಲ್ಲಿ ನನ್ನ ತಂದೆ ಜೀವಿಸಲಾರ. ಇದನ್ನು ಯೋಚಿಸಿ ನಿರ್ಣಯವನ್ನು ತೆಗೆದುಕೊಳ್ಳಿ.''

''ನನ್ನ ಜೊತೆ ಸಮಾಗಮ ಹೊಂದಿದರೂ ನೀನು ಕನ್ಯೆಯಾಗಿಯೇ ಹಿಂತಿರುಗುವೆ. ನಿನಗೆ ಬೇಕಾದ ವರವನ್ನು ಕೇಳು.

''ಹಾಗಾದರೆ ನನ್ನ ಮೈಯಿಂದ ಬರುವ ಮೀನಿನ ದುರ್ಗಂಧವನ್ನು ಹೋಗಲಾಡಿಸಿ ಸ್ತ್ರೀ ಸಹಜವಾದ ಸದ್ಗುಣಗಳನ್ನು ನನಗೆ ಪಾಲಿಸಿ''.

ಪರಾಶರರು ತಮ್ಮ ತಪೋಬಲದಿಂದ ಮತ್ಸ್ಯಗಂಧಿಯನ್ನು ಸುಗಂಧೆಯನ್ನಾಗಿ ಮಾಡಿದರು. ಅವಳ ಸುಗಂಧವು ನಾಲ್ಕು ಮೈಲಿಯಷ್ಟು ಹರಡುತ್ತಿತ್ತು. ಅವಳನ್ನು ಎಲ್ಲರೂ ಯೋಜನಗಂಧಿ ಎಂದು ಕರೆಯಲಾರಂಭಿಸಿದರು.

ನೌಕೆಯಲ್ಲಿ ಯಮುನಾನದಿಯ ಮಧ್ಯೆ ಸಮಾಗಮವಾಯಿತು. ಕೂಡಲೆ ಒಬ್ಬ ಬಾಲಕ ಜನಿಸಿದ ಆ ಬಾಲಕನೇ ವ್ಯಾಸ ಮಹರ್ಷಿಗಳೆಂದೆನಿಸಿಕೊಂಡ. ಹುಟ್ಟಿದ ಮಗು.

''ತಾಯೇ, ನಿನಗೆ ಕಷ್ಟ ಬಂದಾಗ ನನ್ನನ್ನು ಸ್ಮರಿಸು ನಾನು ನಿನಗೆ ಸಹಾಯ ಮಾಡುವೆ'' ಎಂದು ಹೇಳಿ ತಪಸ್ಸು ಮಾಡಲು ಹೊರಟುಬಿಟ್ಟ.

ಯೋಜನ ಗಂಧಿ, ಸತ್ಯವತಿ ಎಂಬ ಹೆಸರಿನಿಂದ ಪ್ರಸಿದ್ಧಳಾದಳು. ಯಮುನಾ ನದಿಯ ದ್ವೀಪದಲ್ಲಿ ಬಾಲಕ ತಪಸ್ಸು ಮಾಹಿದ ಕಾರಣ 'ದ್ವೈಪಾಯನ' ಎಂಬ ಹೆಸರನ್ನು ಪಡೆದ. ಸತ್ಯವತಿ ಮತ್ತೆ ಕನ್ಯೆಯಾಗಿ ಮನೆಗೆ ಹಿಂದಿರುಗಿದಳು. ಮನೆಗೆ ಹೋಗಿ ತಂದೆಯ ಹತ್ತಿರ ತನ್ನ ಕಥೆಯನ್ನು ತಿಳಿಸಿದಳು. ಅಂದಿನಿಂದ ಅವಳು ಸತ್ಯವತಿಯಾದಳು.

ಅಂದಿನ ಯುಗದಲ್ಲಿ ಧರ್ಮಲೋಪ ವಾಗುತ್ತಿತ್ತು. ಮನುಷ್ಯನ ಆಯುಷ್ಯ ಮತ್ತು ಶಕ್ತಿ ಕ್ಷೀಣವಾಗತೊಡಗಿತು. ಇವುಗಳನ್ನು ಉಳಿಸಿಕೊಳ್ಳಲು ದ್ವೈಪಾಯನರು ವೇದಗಳನ್ನು ಸಂಗ್ರಹಿಸಿ ಸಂಕಲನ ಮಾಡಲು ಪಣತೊಟ್ಟರು. ವೇದಗಳನ್ನು ಶ್ರುತಿ ಎಂದೂ ಹೇಳುತ್ತಾರೆ. ವೇದ ಪಠನ ಮಾಡಲು ಆಗ ಅನೇಕ ಪ್ರಣಾಲಿಕೆಗಳಿದ್ದವು. ವೇದಗಳ ಮಂತ್ರ, ಶಬ್ದ ಮತ್ತು ಪ್ರತಿಯೊಂದು ಅಕ್ಷರಗಳನ್ನು ಸುನಿಶ್ಚಿತ ರೀತಿಯಲ್ಲಿಡುವುದಕ್ಕೆ ಬೇರೆ ಮಾರ್ಗವಿರಲಿಲ್ಲ. ಕಿವಿಯ ಮೂಲಕವೇ ಕೇಳಿ ಶುದ್ಧ ಉಚ್ಛಾರಣೆ ಮಾಡಿ ಅವುಗಳನ್ನು ಉಳಿಸಿಕೊಳ್ಳಲು ಕ್ರಮಪಾಠ, ಘನಪಾಠ, ಜಟಾಪಾಠ, ರೇಖಾಪಾಠ, ಮಾಲಾಪಾಠ, ಧ್ವಜಪಾಠ, ದಂಡಪಾಠ ಮತ್ತು ರಥಪಾಠಗಳನ್ನು ಅಳವಡಿಸಿಕೊಂಡಿದ್ದರು.

ವೇದವ್ಯಾಸರು ವಿಷಯಾನುಸಾರವಾಗಿ ನಾಲ್ಕು ವಿಭಾಗಗಳಾಗಿ ವಿಂಗಡಿಸಿದರು - ಸಂಹಿತ, ಬ್ರಾಹ್ಮಣ, ಆರಣ್ಯಕ ಮತ್ತು ಉಪನಿಷತ್ತು ಸಂಹಿತೆಗಳ ಮಂತ್ರಗಳನ್ನು ಧಾರ್ಮಿಕವಾದ ಅನುಷ್ಠಾನಗಳಲ್ಲಿ ಬಳಸುತ್ತಿದ್ದರು. ಬ್ರಾಹ್ಮಣಗಳಲ್ಲಿ ಮಂತ್ರಗಳನ್ನು ಎಲ್ಲಿ ಹೇಗೆ ಪಠಿಸಬೇಕೆಂಬ ಪೂರ್ಣ ವಿವರಗಳನ್ನು ಕೊಟ್ಟಿದ್ದಾರೆ.

ಋಗ್ವೇದದಲ್ಲಿ ಇಪ್ಪತ್ತೊಂದು ಶಾಖೆಗಳಿವೆ. ಇಲ್ಲಿ ಶಾಖೆಗಳೆಂದರೆ ಸಂಪಾದನೆಯ ಕ್ರಮ ಎಂದರ್ಥ. ಒಬ್ಬ ಋಷಿ ತನ್ನ ಶಿಷ್ಯನಿಗೆ ವೇದ ದೇವತೆಯ ಕ್ರಮದಲ್ಲಿ ಕಂಠಪಾಠ ಮಾಡಿಸಿದನೆಂದರೆ ಮತ್ತೊಬ್ಬ ಋಷಿ ಛಂದಸ್ಸಿನ ಕ್ರಮದಲ್ಲಿ, ಮತ್ತೊಬ್ಬ, ಋಷಿ ಕ್ರಮದಲ್ಲಿ ಮಾಡಿಸಿದನೆಂದರೆ, ಬೇರೊಬ್ಬ ವೇದಗಳ ವಿನಿಯೋಗಕ್ರಮದಲ್ಲಿ ಮಾಡಿಸಿದ. ಹೀಗೆ ಕ್ರಮ ಭೇದ ದೃಷ್ಟಿಯಿಂದ ವೇದಗಳ ನಾಲ್ಕು ಶಾಖೆಗಳಾದವು. ಋಗ್ವೇದದಲ್ಲಿ ನಾಲ್ಕು ಋಷಿಗಳು ಅಥವಾ ಮೂರು ಋಚಗಳು ಮತ್ತೆ ಕೆಲವು ಎರಡು ಪಂಕ್ತಿಗಳಲ್ಲಿ ಛಂದೋಬದ್ಧವಾಗಿವೆ. ಗಾಯತ್ರಿ, ಅನುಷ್ಟುಪ್, ಬೃಹತಿಪಂಕ್ತಿ, ತುಷ್ಟುಪ್, ಜಗತಿ - ಮುಂತಾದ ಛಂದಸ್ಸಿನಿಂದ ರಚಿತವಾಗಿದೆ. ಈ ಮಂತ್ರಗಳಲ್ಲಿ

ಸ್ತುತಿ, ಕರ್ಮ ಕಾಂಡ ಮತ್ತು ದರ್ಶನ ಶಾಸ್ತ್ರದ ಜ್ಞಾನ ಅಡಗಿವೆ.

ಯಜುರ್ವೇದದ ಅಧಿಕ ಭಾಗ ಗದ್ಯದಲ್ಲಿದೆ. 'ಯಜುರ್' ಎಂದರೆ ಉಪಾಸನೆ. ಯಜುರ್ ವೇದದ ಉದ್ದೇಶವೇನೆಂದರೆ ಪವಿತ್ರ ಉಪಾಸನೆ, ಯಜ್ಞ - ಕರ್ಮಕಾಂಡಗಳ ಮಹತ್ವ ಮತ್ತು ಅವುಗಳ ವಿಧಿಗಳನ್ನು ನಿಯಮಗಳನ್ನು ಸ್ಪಷ್ಟಪಡಿಸುವುದು. ಯಜುರ್‌ವೇದದ ಎರಡು ಪಾಠಗಳಿವೆ. - ಶುಕ್ಲ ಯಜುರ್‌ವೇದ, ಕೃಷ್ಣ ಯಜುರ್‌ವೇದ. ಶುಕ್ಲ ಯಜುರ್‌ವೇದದ ಎಂಬತ್ತಾರು ಶಾಖೆಗಳಿವೆ.

ಸಾಮವೇದವನ್ನು ಗಾಯನ ವೇದವೆಂದು ಹೇಳಬಹುದು. ಸಂಗೀತದ ರಾಗ ಭೇದಗಳಿಂದ ಸಾವಿರಕ್ಕೂ ಹೆಚ್ಚು ಶಾಖೆಗಳಿವೆ.

ಅಥರ್ವವೇದ - ಸ್ವರಕ್ಷಣೆ, ದೀರ್ಘ ಜೀವನ ಕೌಂಟುಂಬಿಕ ಐಕ್ಯತೆ ಮತ್ತು ಕ್ಷೇಮವನ್ನು ಉದ್ದೇಶಿಸಿ ಬರೆಯಲ್ಪಟ್ಟ ವೇದ. ಭೂತ, ಪ್ರೇತಾದಿ ದುಷ್ಟಆತ್ಮಗಳನ್ನು ದೂರಪಡಿಸುವುದು. ಅವುಗಳ ದುಷ್ಟಭಾವವನ್ನು ಅಗಲಿಸುವುದು ಇದರ ಮುಖ್ಯ ಉದ್ದೇಶ.

ಬ್ರಾಹ್ಮಣ ಗ್ರಂಥ, ಅರಣ್ಯಕ ಮತ್ತು ಉಪನಿಷತ್ತು, ಸೂತ್ರಗಳು -ಗುಹ್ಯಸೂತ್ರ, ಬ್ರಹ್ಮಸೂತ್ರ, ಪ್ರತಿಶಾಖ್ಯ ಮತ್ತು ಅನುಕ್ರಮಣಿಯನ್ನು ವೇದಗಳ ಅನುಪೂರಕ ಸಾಹಿತ್ಯವೆಂದು ಹೇಳುತ್ತಾರೆ.

ವೇದಾಂಗಗಳು ಆರು - ಶಿಕ್ಷಾ, ವ್ಯಾಕರಣ, ನಿರುಕ್ತ, ಕಲ್ಪ, ಛಂದಸ್ಸು, ಜ್ಯೋತಿಷ. ಇವುಗಳನ್ನು ಕ್ರಮಶಃ ವೇದದ ಮೂಗು, ಬಾಯಿ, ಕಿವಿ, ಕೈ ಚರಣ ಮತ್ತು ನೇತ್ರವೆಂದು ಹೇಳುತ್ತಾರೆ. ಹೀಗೆ ವಿಸ್ತಾರವಾಗಿ ವಿಂಗಡಿಸಿದ ಕಾರಣ ದ್ವೈಪಾಯನನಿಗೆ ವೇದವ್ಯಾಸರು ಎಂಬ ಹೆಸರು ಬಂದಿತು.

ವೇದವ್ಯಾಸರು ಮಹಾಭಾರತವನ್ನು ಬರೆದಿದ್ದಾರೆ. ಇದನ್ನು ಇತಿಹಾಸವೆಂದು ಹೇಳುತ್ತಾರೆ. ಇತಿ+ಹಾಸ= ಇತಿಹಾಸ ಎಂದರೆ ಹೀಗೆ ನಿಶ್ಚಯವಾಗಿ ನಡೆಯಿತು ಎಂದರ್ಥ. ಮಹಾಭಾರತವು ಆರ್ಯ ಸಂಸ್ಕೃತಿ ಮತ್ತು ಭಾರತೀಯ ಸನಾತನ ಧರ್ಮದ ಒಂದು ಅಮೂಲ್ಯ ಗ್ರಂಥ, ಅಮೂಲ್ಯ ರತ್ನದ ಭಂಡಾರ. ವೇದವ್ಯಾಸರು ಹೇಳಿರುವ ಹಾಗೆ ಮಹಾಭಾರತದಲ್ಲಿ ವೇದಗಳ ರಹಸ್ಯ ಮತ್ತು ವಿಸ್ತಾರ, ಉಪನಿಷತ್ತುಗಳ ಸಂಪೂರ್ಣಸಾರ, ಇತಿಹಾಸ ಪುರಾಣಗಳ ಉನ್ಮೇಷ, ನಿಮೇಷ, ಚಾತುರ್ವರ್ಣ್ಯದ ವಿಧಾನಗಳು, ಪುರಾಣಗಳ ಆಶಯ, ಗ್ರಹನಕ್ಷತ್ರಗಳ, ತಾರಾಬಲಗಳ ಪರಿಮಾಣ, ನ್ಯಾಯ, ಶಿಕ್ಷೆ ಚಿಕಿತ್ಸೆ, ದಾನ, ಪಾಶುಪತ, ತೀರ್ಥಗಳು, ಪುಣ್ಯಾದೇಶಗಳು ನದಿಗಳು, ಪರ್ವತಗಳು, ವನಪ್ರದೇಶಗಳು ಮತ್ತು ಸಮುದ್ರಗಳ ವರ್ಣನೆ ಇದೆ.

ಮಹಾಭಾರತ ಒಂದು ಕಾವ್ಯ. ಗೂಢಾರ್ಥಮಯ ಜ್ಞಾನ, ವಿಜ್ಞಾನ ಶಾಸ್ತ್ರ ಧರ್ಮಗ್ರಂಥ, ರಾಜನೀತಿ ದರ್ಶನ, ಕರ್ಮಯೋಗ ದರ್ಶನ, ಭಕ್ತಿಶಾಸ್ತ್ರದ ಮಹಿಮೆ, ಆಧ್ಯಾತ್ಮ ಶಾಸ್ತ್ರದ ಹಿರಿಮೆ ಮತ್ತು ಆರ್ಯ ಜಾತಿಯ ಇತಿಹಾಸವಾಗಿದೆ. ಸರ್ವಾರ್ಥ ಸಾಧಕ ಮತ್ತು ಸರ್ವ ಶಾಸ್ತ್ರಸಂಗ್ರಹವಾಗಿದೆ. ಇದರಲ್ಲಿ ಒಂದು ಅದ್ವಿತೀಯ, ಸರ್ವಜ್ಞ, ಸರ್ವ ಶಕ್ತಿ ಸಂಪನ್ನ, ಸರ್ವಲೋಕ ಮಹೇಶ್ವರ, ಪರಮ ಯೋಗೇಶ್ವರ, ಅಚಿಂತ್ಯಾನಂತ ಗುಣಗಣ ಸಂಪನ್ನ, ಸೃಷ್ಟಿಸ್ಥಿತಿ ಪ್ರಳಯಕಾರಿ, ವಿಚಿತ್ರ ಲೀಲಾವಿಹಾರಿ, ಅನಂತ ಪ್ರೇಮ ಸಾಗರ, ಸಚ್ಚಿದಾನಂದ, ಘನ ವಾಸುದೇವ, ಭಗವಂತ ಶ್ರೀಕೃಷ್ಣನ ಗುಣಗಾನವಿದೆ. ಆದುದರಿಂದಲೇ ಉಪನಿಷತ್ತು ಋಷಿಗಳು, ಇತಿಹಾಸ ಪುರಾಣಗಳನ್ನು ಪಂಚಮವೇದ ಎಂದು ಹೇಳಿ ಮಹಾಭಾರತಕ್ಕೆ ಎಲ್ಲಕ್ಕಿಂತ ಹೆಚ್ಚು ಮಹತ್ವವನ್ನು ಕೊಟ್ಟಿದ್ದಾರೆ. ವೇದ ವ್ಯಾಸರಿಗೆ ಇದನ್ನು ಬರೆಯುವ ಆಸೆ ಉಂಟಾಯಿತು. ಆದರೆ ಬರೆಯಲು ತೊಡಗಿದರೆ ವಿಚಾರಕಿರಣಗಳು ಎಡೆಬಿಡದೆ ಧಾರಾಕಾರವಾಗಿ ಹರಿಯುವಾಗ ಬರವಣಿಗೆಗೆ ಅಡಚಣೆಯುಂಟಾಗುತ್ತಿತ್ತು. ಹೇಳುತ್ತಾ ಹೇಳುತ್ತಾ ಬರೆಯಲು ಯಾರಾದರು ಒಬ್ಬ ಬರಹಗಾರ ಸಿಕ್ಕಿದರೆ ಉತ್ತಮ ಎಂದು ಅವರ ಮನಸ್ಸಿಗೆ ಆಯಿತು. ಕೂಡಲೇ ವ್ಯಾಸಮಹರ್ಷಿಗಳು ಬ್ರಹ್ಮನನ್ನು ಮೊರೆ ಹೊಕ್ಕರು. ಬ್ರಹ್ಮನು ಗಣೇಶನೇ ಇದಕ್ಕೆ ಯೋಗ್ಯವಾದ ವ್ಯಕ್ತಿ ಅವನನ್ನು ಕರೆದು ಬರೆಯುವಂತೆ ಮಾಡುವುದಾಗಿ ಹೇಳಿದರು. ವ್ಯಾಸರು ಗಣೇಶನನನ್ನು ಕರೆಸಿದರು. ವ್ಯಾಸರ ಮಾತುಗಳನ್ನು ಕೇಳಿ ಗಣೇಶನು ಈ ಸಂಕಟಕ್ಕೆ ಸಿಲುಕಬಾರದೆಂದು ಭಾವಿಸಿ ಅದರಿಂದ ತಪ್ಪಿಸಿಕೊಳ್ಳಲು ಒಂದು ಉಪಾಯವನ್ನು ಯೋಚಿಸಿ ಹೀಗೆಂದ, ''ನಾನು ಬರೆಯಲು ಸಿದ್ಧ; ಆದರೆ ಒಂದು ಷರತ್ತು. ನಾನು ಬರೆಯುತ್ತಾ ಹೋಗುವಾಗ ನೀವು ಹೇಳುವುದನ್ನು ನಿಲ್ಲಿಸಬಾರದು. ಹಾಗೆ ನಿಲ್ಲಿಸಿದರೆ ನಾನು ಬರೆಯುವುದನ್ನು ಬಿಟ್ಟು ಹೊರಟು ಬಿಡುವೆ.'' ಅದಕ್ಕೆ ವ್ಯಾಸಮುನಿಗಳು ಹೀಗೆಂದರು, ''ನಿನ್ನ ಷರತ್ತನ್ನು ನಾನು ಒಪ್ಪಿಕೊಳ್ಳುತ್ತೇನೆ. ಆದರೆ ಬರೆಯುವಾಗ ನಾನು ಹೇಳುವುದನ್ನು ಅರ್ಥ ಮಾಡಿಕೊಂಡು ಬರೆಯಬೇಕು. ನಿನ್ನ ಇಚ್ಛಾನಿಚ್ಛೆಗಳನ್ನು ಅದರಲ್ಲಿ ಸೇರಿಸಬಾರದು ಮತ್ತು ಮಧ್ಯೆ ಬಾಯಿ ಹಾಕಬಾರದು.'' ಹೀಗಾಗಿ ಬೇರೆ ದಾರಿ ಇಲ್ಲದೆ ಸಿಕ್ಕಿ ಬಿದ್ದ ಗಣಪತಿ ಬರೆಯಲು ಬೇಕಾದ ತಾಳೆ ಪತ್ರಗಳನ್ನು ಸಂಗ್ರಹಿಸಿದರು. ಅದಕ್ಕೆ ಅರಿಶಿನವನ್ನು ಹಚ್ಚಿದರು. ನೂಲನ್ನು ಪೋಣಿಸಿದರು. ಬರೆಯುವ ಆಣೆಯನ್ನು ಲೇಖಣಿಪಟ್ಟಿ ಸಿದ್ಧ ಪಡಿಸಿದರು. ಎಲ್ಲಿ ಕುಳಿತು ಬರೆಯುವುದು? ಜನಸಂದಣಿಯಿಲ್ಲದ ಭಾರತದ ಸೀಮಾಪ್ರಾಂತ್ಯದಲ್ಲಿರುವ 'ಮಾನ' ಎಂಬ ಹಳ್ಳಿಯನ್ನು ಆರಿಸಿಕೊಂಡರು. ಈ 'ಮಾನ' ಹಳ್ಳಿ ಬದರೀನಾಥದಿಂದ ನಾಲ್ಕುವರೆ ಕಿ.ಮೀ. ದೂರದಲ್ಲಿ ಅಲಕನಂದಾ ಮತ್ತು ಸರಸ್ವತಿಯ ಸಂಗಮ ಸ್ಥಾನದಲ್ಲಿದೆ. ಇದು ಹಿಮಾವೃತ್ತ ಪ್ರದೇಶ. 5370 ಮೀ. ಎತ್ತರದಲ್ಲಿರುವ ಹಿಮದಿಂದ ಆವೃತ್ತವಾದ ಭಾರತ ಮತ್ತು ಟಿಬೆಟ್ಟಿನ ಸೀಮಾಪ್ರದೇಶ. ಈ ಪ್ರದೇಶದಲ್ಲಿ 6 ತಿಂಗಳು ಮಾತ್ರ ಜನ ವಾಸವಿರುತ್ತಾರೆ. ಇಲ್ಲಿ ಒಂದು ಗುಹೆ ಇದೆ. ಇದನ್ನು ವ್ಯಾಸಗುಹೆಯೆಂದು ಹೇಳುತ್ತಾರೆ. ಈ ಗುಹೆಯ ಬಳಿ ಒಂದು ಬೃಹದಾಕಾರದ ಕಲ್ಲುಬಂಡೆ ಇದೆ. ಆ ಬಂಡೆಯ ಮೇಲೆ 5 ಸಾವಿರ ಪುಟಗಳ ಪುಸ್ತಕವನು ತೆರೆದಿಟ್ಟರೆ ಹೇಗೆ ಕಾಣಿಸುತ್ತದೆಯೋ ಹಾಗೆ ಒಂದು ಕಲ್ಲಿನ



# ಶ್ರೀ ಪದ್ಮಾವತೀ ಪರಿಣಯ





ತಿರುಮಲೆಯಲ್ಲಿ ಮೇ ತಿಂಗಳ
ಮೊದಲ ಮೂರು ದಿನಗಳು ವಾರ್ಷಿಕ
ಶ್ರೀ ಪದ್ಮಾವತೀ ಪರಿಣಯ ನಡೆಯಿತು.
ನಾರಾಯಣವನದ
ವಿವಾಹಮಂಟಪದಲ್ಲಿ
ಮೂರು ದಿನವೂ ಸ್ವಾಮಿ ಹಾಗೂ
ಉಭಯನಾಯಕಿಯರ ವಿವಾಹ
ಅತ್ಯಂತ ಸಡಗರ ಸಂಭ್ರಮದಿಂದ
ನಡೆದವು.
ಅಲ್ಲಿಂದ ಮೆರವಣಿಗೆಯಲ್ಲಿ
ಆಲಯಕ್ಕೆ ಕರೆದುಕೊಂಡು
ಬರಲಾಯಿತು.









ನಾಗುಲಾಪುರಂ

# ಶ್ರೀ ವೇದನಾರಾಯಣಸ್ವಾಮಿ ಬ್ರಹ್ಮೋತ್ಸವಗಳು

5-5-2001 ರಿಂದ 14-5-2001 ರ ವರೆಗೆ ನಾಗುಲಾಪುರದಲ್ಲಿ ಶ್ರೀ ವೇದನಾರಾಯಣಸ್ವಾಮಿ ಬ್ರಹ್ಮೋತ್ಸವಗಳು ಅತ್ಯಂತ ವೈಭವದಿಂದ ನಡೆದವು. ತದಂಗವಾಗಿ ಸ್ವಾಮಿಯ ವಿವಿಧ ವಾಹನೋತ್ಸವಗಳು ದಿನವೂ ಬೆಳಗ್ಗೆ ಸಂಜೆಗಳಲ್ಲಿ ನಡೆದವು. ಶ್ರೀ ವೇದನಾರಾಯಣಸ್ವಾಮಿ ಹಾಗೂ ಉಭಯ ನಾಯಕಿಯರ ಕಲ್ಯಾಣೋತ್ಸವವೂ ನಡೆಯಿತು.



ಗ್ರಂಥವಿದೆ. ಅಕ್ಷರವಂತೂ ಅದರಲ್ಲಿ ಕಾಣಿಸುವುದಿಲ್ಲ. ಆದರೆ ಮಹಾಭಾರತದ ಕಥೆಯನ್ನು ಪ್ರತ್ಯಕ್ಷ ದರ್ಶನ ಮಾಡಿಸುತ್ತದೆ. ಈ ಕಲ್ಲಿನ ಗ್ರಂಥ. ಈ ಗುಹೆಯಲ್ಲೇ ವೇದವ್ಯಾಸರು ಗಣೇಶನ ಸಹಾಯದಿಂದ ಎಲ್ಲಾ ಗ್ರಂಥಗಳನ್ನು ಸಿದ್ಧಪಡಿಸಿದರು. ಭೋಜಪತ್ರದ ಹಳೆಯ ಗ್ರಂಥವನ್ನು ಬಿಚ್ಚಿಟ್ಟಹಾಗೆ ಎಷ್ಟುಸುಂದರವಾಗಿ ಕಾಣುತ್ತದೆಂದರೆ ಹೇಳಲಿಕ್ಕೆ ಅಸಾಧ್ಯ. ಶಾಂತವಾತಾವರಣ ಅಲಕನಂದಾ ಸರಸ್ವತಿಯ ಪವಿತ್ರ ಜಲ, ಕಾಡಿನ ಹಣ್ಣು, ಹಂಪಲುಗಳು ಮತ್ತೇನು ಬೇಕು ವ್ಯಾಸರಿಗೆ? ಇದನ್ನೇ ತಮ್ಮ ಬೀಡಾಗಿ ಮಾಡಿಕೊಂಡಿದ್ದರು.

ಮಹಾಭಾರತದಲ್ಲಿ ಇಲ್ಲದಿರುವ ವಿಷಯ ಬೇರೆ ಎಲ್ಲೂ ಇಲ್ಲ. ಇದರಲ್ಲಿರುವ ಎಲ್ಲ ವಿಷಯವೂ ಲೋಕದಲ್ಲಿ ಉಂಟು ಎಂಬುದು ಮಹಾಭಾರತದ ವೈಶಿಷ್ಟವನ್ನು ತೋರಿಸಿಕೊಡುತ್ತದೆ. ಉದಾಹರಣೆಗೆ, ಈಗಿನ ಕಾಲದ ಟೆಸ್ಟ್‌ಟ್ಯೂಬ್ ಬೇಬಿಗಳನ್ನು ಉಂಟುಮಾಡುವ ಕ್ರಮವನ್ನು ಆಗಿನಕಾಲದ ಋಷಿಮುನಿಗಳು ''ಜಾರ್‌ಬೇಬಿ ನೂರೊಂದು'' ಜನ ಕೌರವರನ್ನುಂಟು ಮಾಡಿ ತೋರಿಸಿದ್ದಾರೆ.

ಈ ಗುಹೆಯಲ್ಲಿಯೇ ವ್ಯಾಸ ಮಹರ್ಷಿಗಳು 18 ಪುರಾಣಗಳನ್ನು ಬರೆದರೆಂದು ಪ್ರತೀತಿ, ಅವುಗಳು ಯಾವುವೆಂದರೆ - 1) ಬ್ರಹ್ಮ, 2) ಪದ್ಮ, 3) ವಿಷ್ಣು 4) ಶಿವ, 5) ಭಾಗವತ, 6) ನಾರದ, 7) ಮಾರ್ಕಂಡೇಯ, 8) ಅಗ್ನಿ, 9) ಭವಿಷ್ಯ, 10) ಬ್ರಹ್ಮವೈವರ್ತ, 11) ಲಿಂಗ, 12) ವರಾಹ, 13) ಸ್ಕಂದ, 14) ವಾಮನ, 15) ಕೂರ್ಮ, 16) ಮತ್ಸ್ಯ, 17) ವಾಯುಮತ್ತು 18) ಬ್ರಹ್ಮಾಂಡ.

ಸತ್ಯವತಿಯ ಮದುವೆಯು ಶಂತನು ವಿನೊಡನೆ ನಡೆದುದು ಎಲ್ಲರಿಗೂ ತಿಳಿದ ವಿಷಯ. ಅವರ ಮಕ್ಕಳು ಇಬ್ಬರು. ಅವರು ಕ್ಷಯರೋಗದಿಂದ ತೀರಿಕೊಂಡರು. ರಾಜ್ಯಕ್ಕೆ ಉತ್ತರಾಧಿಕಾರಿ ಬೇಕಾಗಿತ್ತು. ಸತ್ಯವತಿಯು ಭೀಷ್ಮನನ್ನು ಬೇಡಿಕೊಂಡಳು. ''ಭೀಷ್ಮ, ರಾಜ್ಯಕ್ಕೆ ಒಬ್ಬ ಉತ್ತರಾಧಿಕಾರಿ ಬೇಕೇ ಬೇಕು. ಅಂಬಿಕೆ ಮತ್ತು ಅಂಬಾಲಿಕೆಯರು ವಿಧವೆಯರಾಗಿದ್ದಾರೆ. ನೀನು ಅವರನ್ನು ಕೂಡಿ ರಾಜ್ಯಕ್ಕೆ ಉತ್ತರಾಧಿಕಾರಿಗಳನ್ನು ಕೊಡುವುದು ನಿನ್ನ ಕರ್ತವ್ಯ''.

ಆಗ ಭೀಷ್ಮ ಹೀಗೆ ಹೇಳಿದ ''ತಾಯಿ, ನನ್ನ ಪ್ರತಿಜ್ಞೆ ನಿಮಗೆ ಗೊತ್ತೇ ಇದೆ. ಬೇರೆ ಉಪಾಯವನ್ನು ಯೋಚಿಸಿ ನೋಡಿ.''

ಹಾಗಾದರೆ ಕೃಷ್ಣ ದ್ವೈಪಾಯನ ವ್ಯಾಸರ ಮೂಲಕ ಅಂಬಿಕೆ ಅಂಬಾಲಿಕೆಯರ ಗರ್ಭದಿಂದ ನಿಯೋಗ ಮಾರ್ಗದಿಂದ ಏಕೆ ಉತ್ತರಾಧಿಕಾರಿಯನ್ನು ಪಡೆಯಬಾರದು.

''ಹೌದು ಇದು ಉತ್ತಮ ಉಪಾಯ''

ಸತ್ಯವತಿಯು ತನ್ನ ಪುತ್ರ ವೇದವ್ಯಾಸರನ್ನು ಸ್ಮರಿಸಿದಳು. ಅವರು ಕೂಡಲೆ ಬಂದರು ಸತ್ಯವತಿ ನಿಯೋಗದ ಪ್ರಸ್ತಾಪವನ್ನು ಮುಂದಿಟ್ಟಳು. ಆಗ ವ್ಯಾಸರು ಹೀಗೆ ಹೇಳಿದರು. ''ನಾನು ಕುರೂಪಿ, ನನ್ನ ಬಣ್ಣ ಕಪ್ಪು, ಅಷ್ಟಾವಕ್ರ, ನಿಯೋಗ ಮಾಡುವಾಗ ಮೈಯೆಲ್ಲಾ ಎಣ್ಣೆ ಹಚ್ಚಿಕೊಂಡು ಬರಬೇಕಾಗುತ್ತದೆ. ನನ್ನನ್ನು ನಿನ್ನ ಸೊಸೆಯಂದಿರು ಸಹಿಸುವರೆ? ಈ ನಿಯೋಗ ಕಾಮ ಇಚ್ಛೆಯಿಂದಲ್ಲ, ಸಂತಾನೋತ್ಪತ್ತಿ ಇಚ್ಛೆಯಿಂದ ಕೂಡುವ ಸಂಯೋಗ, ಇದರಲ್ಲಿ ಮೈ ಮನ ಬೆರೆಯದ ಪಕ್ಷದಲ್ಲಿ ಉತ್ತಮ ಸಂತಾನ ಪಡೆಯುವುದು ಅಸಾಧ್ಯ, ಇದಕ್ಕೆ ಒಪ್ಪಿಗೆ ಯಾದರೆ ನಾನು ನಿಯೋಗಕ್ಕೆ ಸಿದ್ಧನಾಗಿದ್ದೇನೆ.''

ನಿಯೋಗ ನಿಶ್ಚಯವಾಯಿತು. ಮೊದಲನೆಯ ದಿನ ಅಂಬಿಕೆಯ ಅಂತಃಪುರಕ್ಕೆ ವ್ಯಾಸರು ಹೋದರು. ಅವರ ಕುರೂಪವನ್ನು ನೋಡಲಾರದೆ ಅವಳು ಕಣ್ಣುಮುಚ್ಚಿಕೊಂಡಳು. ನಿಯೋಗವೇನೋ ನಡೆಯಿತು. ಕಣ್ಣುಮುಚ್ಚಿದ ಕಾರಣ, ಮನ ಬೆರೆಯದ ಕಾರಣ ಮಗು ಧೃತರಾಷ್ಟ್ರ ಅಂಧನಾಗಿ ಜನ್ಮತಾಳಿದ. ಮಾರನೆಯ ದಿವಸ ಅಂಬಾಲಿಕೆಯ ಅಂತಃಪುರಕ್ಕೆ ವ್ಯಾಸಮಹರ್ಷಿಗಳು ಹೋದರು. ಅವರು ಬಿಳಿ ಬಟ್ಟೆಯನ್ನು ತೆರೆಹಾಕಿಕೊಂಡಳು. ಆದಕಾರಣ ಪಾಂಡುವರ್ಣದ ಪಾಂಡುವಿನ ಜನ್ಮವಾಯಿತು. ಮಹಾರಾಣಿಯವರ ಸಖಿಯಾಗಿದ್ದ ಸೇವಕಿಯೊಬ್ಬಳು ವ್ಯಾಸರಿಗೆ ಒಲಿದಳು. ತನು, ಮನ ಬೆರೆಯಿತು. ಅವಳ ಗರ್ಭದಿಂದ ವಿದುರ ಜನ್ಮತಾಳಿದ. ವಿದುರ ಧರ್ಮ ಮತ್ತು ಜ್ಞಾನದಲ್ಲಿ ನಿಪುಣನಾದ. ಬುದ್ಧಿ ಮೇಧಾವಿಗಳ ಸಂಗಮವಾಗಿ ಪವಿತ್ರ ಜನ್ಮವನ್ನು ತಾಳಿದರೂ ಶೂದ್ರಳ ಗರ್ಭದಿಂದ ಹುಟ್ಟಿದ ಕಾರಣ ರಾಜ್ಯ ಶಾಸನದ ಧರ್ಮವನ್ನು ಪಾಲಿಸಿದರೂ ಅವನಿಗೆ ರಾಜ್ಯದ ಅಧಿಕಾರ ಲಭಿಸಲಿಲ್ಲ. ಹೀಗೆ ಮಹಾಭಾರತದ ಮಹಾನ್ ವ್ಯಕ್ತಿಗಳ ಜನ್ಮದಾತನಾಗಿದ್ದ ವೇದವ್ಯಾಸ. ಮಹಾಭಾರತದ ಕರ್ತೃವೇ ಅಲ್ಲದೆ ಪಾತ್ರಗಳ ಜನ್ಮದಾತನೂ ಆಗಿದ್ದ.

ಮಾನಸ ಸರೋವರದಲ್ಲಿ ಅಪ್ಸರೆಯರು ನಗ್ನವಾಗಿ ಜಲಕ್ರೀಡೆ ಮಾಡುತ್ತಿದ್ದರು. ಅದೇ ಸಮಯದಲ್ಲಿ ವ್ಯಾಸ ಮಹರ್ಷಿಗಳು ಪೂರ್ವದಿಂದ ದಕ್ಷಿಣಕ್ಕೆ ಹೋಗುತ್ತಿದ್ದರು. ವ್ಯಾಸಮಹರ್ಷಿಗಳ ಮಗ ಶುಕದೇವ ನಗ್ನತಪಸ್ವಿ. ಸರೋವರದ ದಂಡೆಯಲ್ಲಿ ಹೋಗುತ್ತಿದ್ದರು. ಮೊಟ್ಟಮೊದಲು ಶುಕದೇವ ನಡೆದು ಹೋದ. ಅವನನ್ನು ನೋಡಿ ಅಪ್ಸರೆಯರು ನಾಚಿಕೆ ಪಡಲಿಲ್ಲ. ನಗ್ನವಾಗಿಯೇ ಹಾಯಾಗಿ ಜಲಕ್ರೀಡೆ ಮಾಡುತ್ತಿದ್ದರು. ಶುಕದೇವ ನಗ್ನನಾಗಿದ್ದರೂ ಕೂಡ ಅಪ್ಸರೆಯರು ನಾಚಿಕೆ ಪಡಲಿಲ್ಲ. ಕೆಲವೇ ಕ್ಷಣಗಳಲ್ಲಿ ವ್ಯಾಸರು ಬಂದರು. ವ್ಯಾಸರು ವಸ್ತ್ರ ಧರಿಸಿದ್ದರೂ ಅವರನ್ನು ನೋಡಿದ ಕೂಡಲೆ ಅಪ್ಸರೆಯರು ನಾಚಿಕೆಯಿಂದ ಓಡಿಹೋಗಿ ವಸ್ತ್ರಗಳನ್ನು ಹೊದ್ದುಕೊಂಡರು. ಇದನ್ನು ನೋಡಿದ ಕೂಡಲೆ ವ್ಯಾಸರಿಗೆ ಆಶ್ಚರ್ಯವಾಯಿತಂತೆ, ಕಾರಣವನ್ನು ಅರಿಯಲು ಅಪ್ಸರೆಯರನ್ನು ಪ್ರಶ್ನಿಸಿದರಂತೆ ಅದಕ್ಕೆ ಉತ್ತರವಾಗಿ ಅಪ್ಸರೆಯರು-

''ನಿಮ್ಮ ದೃಷ್ಟಿಯಲ್ಲಿ ಭೇದ ಭಾವವಿದೆ. ಯಾರು ಪುರುಷರು ಯಾರು ಸ್ತ್ರೀಯರು ಎಂಬುದು ನಿಮ್ಮ ದೃಷ್ಟಿಗೆ ಗೋಚರವಾಗುತ್ತಾದೆ. ಆದರೆ ನಿಮ್ಮ ಮಗನ ದೃಷ್ಟಿಯಲ್ಲಿ ಈ ಭೇದ ಭಾವವಿಲ್ಲ. ಅವನಿಗೆ ಕಾಣಿಸುವುದು ಸ್ತ್ರೀ, ಪುರುಷರಲ್ಲ, ಬ್ರಹ್ಮಮಾತ್ರವೇ, ಆ ಬ್ರಹ್ಮ ಜ್ಞಾನಿಯ ದೃಷ್ಟಿಯಲ್ಲಿನಾವು ನಗ್ನವಾಗಿ ಕಂಡರೂ ಬ್ರಹ್ಮಸ್ವರೂಪವೆಂದು ಭಾವಿಸಿದ, ಆದುದರಿಂದ ನಮಗೆ ನಾಚಿಕೆ, ಹೇಸಿಗೆಯಾಗಲಿಲ್ಲ.'' ಇದನ್ನು ಕೇಳಿ ವೇದವ್ಯಾಸರು ತಲೆಬಾಗಿದರು. ತನ್ನ ಪುತ್ರ ತನಗಿಂತಲೂ ಹೆಚ್ಚು ಜ್ಞಾನಿ ಎಂಬುದನ್ನು ಕೇಳಿ ಬಹಳ ಸಂತೋಷಪಟ್ಟರಂತೆ. ''ಪುತ್ರಾತ್ ಶಿಷ್ಯಾತ್ ಪರಾಜಯಂ ಕಾಮಯೇತ್'' ಎಂಬುದು ಭಾರತೀಯ ಪರಂಪರೆ, ದ್ರೋಣಾಚಾರ್ಯರು ಏಕಲವ್ಯನ ಹೆಬ್ಬೆಟ್ಟನ್ನು ಗುರುದಕ್ಷಿಣೆಯಾಗಿ ಪಡೆದ ಪ್ರಸಂಗವು ನಮಗೆ ಕಂಡು ಬರುತ್ತದೆ. ಆದರೆ ವ್ಯಾಸರು ಅಂತಹವರಲ್ಲ ಕಪ್ಪು ಬಣ್ಣದವರಾದ್ದರಿಂದ ಅವರನ್ನು ಕೃಷ್ಣ ದ್ವೈಪಾಯನ ಎಂದು ಕರೆಯುತ್ತಾರೆ.

★★★★★

# ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿ.

# ಯಾತ್ರಿಕರಿಗೆ ಸೂಚನೆ

**ವಸತಿ :**

ತಮ್ಮ ಅತಿ ಸಮೀಪದ ತಿ.ತಿ.ದೇ. ಸಮಾಚಾರ ಕೇಂದ್ರದಿಂದ, ತಿರುಮಲೆಯಲ್ಲಿ ತಮ್ಮ ವಸತಿಯ ಮುಂಗಡ ಮೀಸಲಾತಿಯನ್ನು ಪಡೆಯಬಹುದು ಅಥವಾ ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇವಸ್ಥಾನಗಳು, ತಿರುಪತಿ - ಇವರ ಹೆಸರಿನಲ್ಲಿ 100 ರೂಪಾಯಿಗಳ ಡಿ. ಡಿ. ಯನ್ನು ಪಡೆದು, ಅಸಿಸ್ಟೆಂಟ್ ಎಕ್ಸಿಕ್ಯುಟಿವ್ ಆಫೀಸರ್ (ಸ್ವಾಗತ - 1) ತಿ. ತಿ. ದೇವಸ್ಥಾನಗಳು; ತಿರುಮಲೆ - ಇವರಿಗೆ ಕನಿಷ್ಠ ಪಕ್ಷ ಒಂದು ತಿಂಗಳ ಮೊದಲು ತಮ್ಮ ಆಗಮನದ ವಿವರಗಳನ್ನು ತಿಳಿಸುವ ಪತ್ರದೊಡನೆ ಕಳುಹಿಸಿ ಮುಂಗಡ ಕಾಯ್ದಿರಿಸಬಹುದು.

ವಿವರಗಳಿಗಾಗಿ ಸಂಪರ್ಕಿಸಿ - ದೂರವಾಣಿ - 77777 ವಿಸ್ತರಣ - 3626.

**ಆರ್ಜಿತ ಸೇವೆಗಳು :**

ಆರ್ಜಿತ ಸೇವೆಗೆ ತಕ್ಕ ಶುಲ್ಕದ ಡಿ. ಡಿ. ಯನ್ನು 'ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ' ಇವರ ಹೆಸರಿಗೆ ಪಡೆದು ಮೂರು ತಿಂಗಳ ಮೊದಲೇ ಅದನ್ನು ತಮ್ಮ ಅಭ್ಯರ್ಥನ ಪತ್ರದೊಡನೆ - ಪೇಷ್ಕಾರ್ ತಿರುಮಲೆ ಆಲಯ,ತಿರುಮಲೆ - ಇವರಿಗೆ ಕಳುಹಿಸಿ ಸೇವೆಯನ್ನು ಖಚಿತ ಪಡಿಸಬಹುದು.

ವಿವರಗಳಿಗಾಗಿ ಸಂಪರ್ಕಿಸಿ - ದೂರವಾಣಿ - 77777 ವಿಸ್ತರಣ - 3679.

**ದರ್ಶಿಸತಕ್ಕ ಸ್ಥಳಗಳು :**

ಆಲಯದ ಪಕ್ಕದಲ್ಲಿರುವ ಸ್ವಾಮಿ ಪುಷ್ಕರಿಣಿ, 2 ಕಿ. ಮೀ. ದೂರದ ಆಕಾಶಗಂಗೆ, 5 ಕಿ.ಮೀ. ದೂರದ ಪಾಪವಿನಾಶಿನಿ, 3 ಕಿ.ಮೀ. ದೂರದ ವೈಕುಂಠತೀರ್ಥ, 16 ಕಿ.ಮೀ. ದೂರದ ತುಂಬುರುತೀರ್ಥ, 1 ಕಿ.ಮೀ. ದೂರದ ಶಿಲಾತೋರಣ, 3 ಕಿ.ಮೀ. ದೂರದ ಸ್ವಾಮಿ ಪಾದಗಳು, ತಿರುಮಲೆಯ ಎಸ್.ವಿ. ಮ್ಯೂಜಿಯಂ.

**ಸಾರಿಗೆ ಸೌಲಭ್ಯ :**

ತಿರುಪತಿಯಿಂದ ಎರಡೂ ಘಟ್ಟದ ರಸ್ತೆಗಳಲ್ಲಿ ಎ.ಪಿ.ಎಸ್.ಆರ್.ಟಿ.ಸಿ. ಯವರು ಸಾಕಷ್ಟು ಬಸ್‌ಗಳನ್ನು ಓಡಿಸುತ್ತಿದ್ದಾರೆ. ಕಾಲು ಹಾದಿಯ ಮೂಲಕ ಬೆಟ್ಟವನ್ನೇರಿ ಹೊರಡುವ ಯಾತ್ರಿಕರಿಗೆ ಪ್ರಾಥಮಿಕ ಕನಿಷ್ಠ ಸೌಲಭ್ಯಗಳುಂಟು. ತಿರುಮಲೆಯಲ್ಲಿ ಕಾಟೇಜುಗಳು, ಸತ್ರಗಳು - ಆಲಯ - ಮೊದಲಾದಗಳ ಪ್ರಯಾಣಕ್ಕೆ ಉಚಿತ ಬಸ್‌ಗಳಿವೆ. ತಿರುಪತಿಯ ಅಲಿಪಿರಿ ಟೋಲ್‌ಗೇಟಿನಿಂದ ಬೆಟ್ಟದ ಮೇಲಕ್ಕೆ ತಮ್ಮ ವಸ್ತುಗಳನ್ನು ಉಚಿತವಾಗಿ ಸಾಗಿಸುವ ಸೌಲಭ್ಯವುಂಟು.

**ಮಾಡಬೇಕಾದವು :**

ಕೆಟ್ಟ ಹವ್ಯಾಸಗಳನ್ನು ಬಿಡುವುದರ ಮೂಲಕ - ಸಹಯಾತ್ರಿಕರಲ್ಲಿ ಧಾರ್ಮಿಕ ಭಾವನೆಗಳನ್ನು ಪ್ರೋತ್ಸಾಹಿಸುವುದರ ಮೂಲಕ, ತಿರುಮಲೆಯ ಪಾವಿತ್ರ್ಯವನ್ನು ಕಾಪಾಡಿರಿ. ತಮ್ಮ ಕಾಣಿಕೆಗಳನ್ನು ಶ್ರೀ ವೆಂಕಟೇಶ್ವರಸ್ವಾಮಿಯ ಆಲಯದ ಹುಂಡಿಯಲ್ಲಿ ಮಾತ್ರವೇ ಸಮರ್ಪಿಸಿರಿ. ಆಲಯದೊಳಗೆ "**ಓಂ ಶ್ರೀ ವೆಂಕಟೇಶಾಯ ನಮಃ**" ಎಂದು ಧ್ಯಾನಿಸಿರಿ. ದೇವರಲ್ಲಿಯೇ ಮನಸ್ಸನ್ನು ಕೇಂದ್ರೀಕರಿಸಿ. ತಿರುಮಲೆಯನ್ನು ಶುಭ್ರವಾಗಿರಿಸಿ.

**ಮಾಡಬಾರದವು :**

ಧೂಮಪಾನ ಮಾಡಬೇಡಿರಿ. ಮತ್ತು ಪದಾರ್ಥಗಳನ್ನು ತೆಗೆದುಕೊಳ್ಳಬೇಡಿರಿ. ಮಾಂಸಾಹಾರವನ್ನು ತೆಗೆದುಕೊಳ್ಳದಿರಿ. ದರ್ಶನ ಹಾಗೂ ವಸತಿಗಾಗಿ ದಳ್ಳಾಳಿಗಳನ್ನು ಆಶ್ರಯಿಸದಿರಿ. ಆಲಯದಲ್ಲಿ ಸುತ್ತ ಮುತ್ತ ಪಾದರಕ್ಷೆಗಳನ್ನು ಧರಿಸದಿರಿ.

# ಭಗವಾನ್ ಶ್ರೀ ವೇದವ್ಯಾಸರ ಜಯಂತಿಯ ಪುಣ್ಯಸ್ಮರಣೆ

- ಕೋಟೇಶ್ವರ ಸೂರ್ಯನಾರಾಯಣರಾವ್.

ವೇದವ್ಯಾಸ ಗುಣಾವಾಸ
ವಿದ್ಯಾಧೀಶ ಸತಾಂವಶ
ಮಾ ನಿರಾಶಾಂ ಗತಕ್ಲೇಶಂ
ಕುರ್ವನಾಶಂ ಹರೇನಿಶಂ
- ಶ್ರೀ ವಾದಿರಾಜತೀರ್ಥರು.

ಭಗವಾನ್ ಶ್ರೀಮನ್ನಾರಾಯಣಾಂಶ ಸಂಭೂತರಾದ ವೇದವ್ಯಾಸರು ಮಹರ್ಷಿ ಪರಾಶರರ - ಹಾಗೂ ಕೈವರ್ತರಾಜನ ಸಾಕುಮಗಳಾದ ಸತ್ಯವತಿಯ ಸುಪುತ್ರರಾಗಿ ದ್ವಾಪರಯುಗದಲ್ಲಿ ಅವತರಿಸಿದ ಓರ್ವ ಅಲೌಕಿಕ ಶಕ್ತಿಸಂಪನ್ನ ಮಹಾಪುರುಷ ರಾಗಿದ್ದರು.

ಮಹಾನ್ ವಿಭೂತಿ ಪುರುಷರಾಗಿ ಜನ್ಮತಳೆದ ವೇದವ್ಯಾಸರು ಸಾತ್ವಿಕ ಸಜ್ಜನರಿಗಾಗಿಯೂ ಸಾಮಾನ್ಯ ಜನರಿಗಾಗಿಯೂ ಅತ್ಯಮೋಘ ಗ್ರಂಥಗಳ ಸರಣಿಯನ್ನೇ ಜಗತ್ತಿಗೆ ನೀಡಿದವರಾಗಿದ್ದಾರೆ. ವೇದವನ್ನು ಮುಂದಿನ ದಿನಗಳಲ್ಲಿ ಜನರು ಅರ್ಥಮಾಡಿಕೊಳ್ಳಲಾರದ ಪರಿಸ್ಥಿತಿ ಬರಬಹುದೆಂದು ಮುಂದಾಗಿಯೇ ಊಹಿಸಿದ ವೇದವ್ಯಾಸರು ಸುಲಲಿತವಾಗಿ ಜನರ ಹೃದಯದಲ್ಲಿ ನೆಲೆಸುವಂತಾಗಲೆಂದು ವೇದವನ್ನು ನಾಲ್ಕು ವಿಭಾಗವನ್ನಾಗಿ ಮಾಡಿ - ಅದಕ್ಕೆ ಋಗ್ವೇದ - ಯಜುರ್ವೇದ - ಸಾಮವೇದ - ಮತ್ತು ಅಥರ್ವವೇದವೆಂದು ನಾಮಕರಣ ಮಾಡಿ - ಒಂದೊಂದು ಸಂಹಿತೆಗೂ ಓರ್ವ ಶಿಷ್ಯರನ್ನು ನಿಯಮಿಸಿ ಬೋಧಿಸಿದರು. ಒಂದೊಂದು ಸಂಹಿತೆಯಿಂದ ಅನೇಕಾನೇಕ ಶಾಖೆಗಳೂ ಉಪಶಾಖೆಗಳೂ ಆದವು. ವೇದವನ್ನು ವಿಸ್ತಾರವಾಗಿ ಮಾಡಿದ ಮಹಾಪುರುಷರಾದ ಇವರಿಗೆ ಅನ್ವರ್ಥ ನಾಮರಾಗಿ ವೇದವ್ಯಾಸರೆಂಬ ಅಭಿಧಾನ ವಾಯಿತು.

ವೇದವ್ಯಾಸರ ಅವತಾರವು ಒಂದು ದ್ವೀಪದಲ್ಲಾಯಿತು. ಇವರ ಮೈಬಣ್ಣ ಶಾಮವರ್ಣವಾದ ಕಾರಣದಿಂದ ಕೃಷ್ಣ ದ್ವೈಪಾಯನ ಎಂಬ ಹೆಸರಿನಿಂದಲೂ ಪ್ರಸಿದ್ಧರಾದರು. ಬದರಿವನದಲ್ಲಿರುವ ಕಾರಣದಿಂದ ಬಾದರಾಯಣರೆಂಬ ಅನ್ವರ್ಥ ನಾಮವೂ ಇವರದಾಯಿತು. ಹದಿನೆಂಟು ಪುರಾಣ ಹಾಗೂ ಮಹಾಭಾರತದ ಕರ್ತೃಗಳಾದ ಇವರಿಂದ ಸಂಕಲಿಸಲಾಗಿ ಉಪನಿಷತ್ತು ತತ್ವಗಳ ನಿರೂಪಣೆಯಿಂದ ಬ್ರಹ್ಮಸೂತ್ರಗಳನ್ನು ನಿರ್ಮಾಣಮಾಡಿದರು. ವ್ಯಾಸಸ್ಮೃತಿ ಎಂಬ ವೇದವ್ಯಾಸ ವಿರಚಿತ ಗ್ರಂಥ ಅತ್ಯಮೂಲ್ಯ ವಾಗಿದ್ದು ಸನಾತನ ಹಿಂದೂ ಧರ್ಮಕ್ಕೆ ಇವರ ಬಹುದೊಡ್ಡಕೊಡುಗೆ ಮರೆಯಲಾರದು ದಾಗಿದೆ. ಶ್ರುತಿ - ಸ್ಮೃತಿ ಪುರಾಣೋಕ್ತ ಸನಾತನ ಧರ್ಮದ ಪ್ರಧಾನ ವ್ಯಾಖ್ಯಾನಕಾರರಾಗಿ ಧರ್ಮದ ಬಾನಂಗಳದಲ್ಲಿ ಮಿಂಚಿದರು. ಹಿಂದೂಧರ್ಮದ ಅಡಿಗಲ್ಲನ್ನಿಟ್ಟ ವೇದವ್ಯಾಸ ರಿಂದ ಋಣಮುಕ್ತರಾಗುವುದು ಸಾಧ್ಯವಿಲ್ಲದ ಮಾತು. ಭಾರತೀಯ ಸಂಸ್ಕೃತಿಯೆಂಬುದು ವೇದವ್ಯಾಸರ ಹೆಸರಿನೊಂದಿಗೆ ಜೋಡಿಸಲ್ಪಟ್ಟು ಜಗದ್ಗುರುಗಳಾಗಿ ಇತಿಹಾಸದ ಶ್ರೇಷ್ಠ ಪಥ ಪ್ರದರ್ಶಕರಾಗಿ ವೇದವ್ಯಾಸ ಕೀರ್ತಿ ಅಮರ.

ಪ್ರಸ್ತುತ ನೇಪಾಲದಲ್ಲಿ ಪೋತರಾ - ತಾರಮಂಡು ರಾಜಮಾರ್ಗದಲ್ಲಿ ಪೋತರಾ ದಿಂದ 50 ಕಿ.ಮೀ. ದೂರದಲ್ಲಿ ದಮೌಲಿ ಎನ್ನುವಗ್ರಾಮವಿದೆ - ಈ ಊರಿನ ಹೊರಭಾಗ



ದಲ್ಲಿಮಾಂದಿ ಮತ್ತು ದರೊಂದಿ ಎನ್ನುವ ಎರಡು ನದಿಗಳ ಸಂಗಮವಿದೆ. ಈ ಸಂಗಮದ ಹತ್ತಿರ ಏಳು ಭಾಗಗಳುಳ್ಳ ಅತ್ಯಂತ ವಿಶಾಲವಾದ ಪ್ರಾಚೀನ ಗುಹೆಯೊಂದಿದೆ. ಈ ಗುಹೆಯ ಒಳಭಾಗದಲ್ಲಿ ವೇದ, ಪುರಾಣ ಇತ್ಯಾದಿ ಮಹಾನ್ ಗ್ರಂಥಗಳನ್ನು ಬ್ರಾಹ್ಮಿಲಿಪಿಯಲ್ಲಿ ಬರೆದಿದ್ದಾರೆ. ಇದು ವೇದವ್ಯಾಸ ಮಹರ್ಷಿಗಳ ನಿವಾಸಸ್ಥಾನವಾಗಿತ್ತೆಂದೂ ಮತ್ತು ವ್ಯಾಸ ಮಹರ್ಷಿಗಳು ಇಲ್ಲಿಯೇ ಪುರಾಣ ಗ್ರಂಥಗಳನ್ನು ರಚನೆ ಮಾಡಿದ್ದರೆಂದೂ ಹೇಳಲ್ಪಡುತ್ತದೆ. ಮಕರ ಸಂಕ್ರಾಂತಿಯಂದು ಇಲ್ಲಿ ವಿಶೇಷ ಜಾತ್ರೆ ಸೇರುತ್ತದೆ. ಉಳಿದ ದಿವಸಗಳಲ್ಲಿ ಟಾರ್ಚಿನೊಂದಿಗೆ ಈ ಗುಹೆಯ ಪ್ರವೇಶ ಮಾಡಿ ವಿವರಗಳನ್ನು ನೋಡಬಹುದಾಗಿದೆ. ಇಲ್ಲಿನ ಸರಕಾರಿ ದಾಖಲೆಗಳಲ್ಲಿ ವ್ಯಾಸಗುಫಾ - ಎಂದೇ ದಾಖಲಿಸಲ್ಪಟ್ಟಿದೆ.

ವೇದವ್ಯಾಸರು ರಚಿಸಿದ ಮಹಾಭಾರತ ಗ್ರಂಥದಲ್ಲಿ ಅವರು ಕೇವಲ ಗ್ರಂಥಕರ್ತರಾಗಿರದೆ - ಪಾತ್ರಧಾರಿಗಳಾಗಿ ತಮ್ಮಾ ಪವಾಡ ಸದೃಶ ಶಕ್ತಿಯನ್ನು ತೋರಿದ್ದಾರೆ. ಅರ್ಜುನನು ಸ್ವಯಂವರದಲ್ಲಿ ದ್ರೌಪದಿಯನ್ನು ಗೆದ್ದಾಗ ಮಾತೆ ಕುಂತಿಯ ಅಪ್ಪಣೆಯಂತೆ ಐವರು ಪಾಂಡವರೂ ದ್ರೌಪದಿಯನ್ನು ವಿವಾಹ ವಾಗಬೇಕಾದ ಪರಿಸ್ಥಿತಿ ಬಂದಾಗ ದ್ರುಪದನಿಗೆ ದ್ರೌಪದಿಯ ಪೂರ್ವವೃತ್ತಾಂತ ತಿಳಿಸಿ ಪಾಂಡವರಿಗಾಗಿಯೇ ಜನ್ಮತಳೆದ ದ್ರೌಪದಿಯನ್ನು ವಿವಾಹಮಾಡಿಸಿದವರು ವೇದವ್ಯಾಸರಾಗಿದ್ದಾರೆ.

ರಾಜಸೂಯ ಯಜ್ಞಕ್ಕೆ ತನ್ನ ಶಿಷ್ಯರೊಡನೆ ಆಗಮಿಸಿದ್ದ ವೇದವ್ಯಾಸರು ಧರ್ಮರಾಯನು ಬೀಳ್ಕೊಡಲು ಬಂದಾಗ ಇನ್ನು ಹದಿಮೂರು ವರ್ಷದ ನಂತರ ಆಗಲಿರುವ ಮಾನವ ಮಾರಣಹೋಮದ ಪೂರ್ವ ಸೂಚನೆಯನ್ನು ದಿವ್ಯದೃಷ್ಟಿಯಿಂದ ತಿಳಿದು ನೀಡಿದ್ದರು. ಧರ್ಮರಾಯನೇ ಅದರಲ್ಲಿ ಪ್ರಧಾನ ಪಾತ್ರವಹಿಸುವ ಬಗ್ಗೆಯೂ ತಿಳಿಸಿದ್ದರು.

ಕುರುಕ್ಷೇತ್ರ ಯುದ್ಧದಲ್ಲಿ ಅಂಧ ಧೃತರಾಷ್ಟ್ರನು ಯುದ್ಧಭೂಮಿಯ ವಾರ್ತೆಗಾಗಿ ಹಪಹಪಿಸುತ್ತಿದ್ದಾಗ ವೇದವ್ಯಾಸರು ಪ್ರತ್ಯಕ್ಷರಾಗಿ ಮಂತ್ರಿ ಸಂಜಯನಿಗೆ ದಿವ್ಯದೃಷ್ಟಿ ಕರುಣಿಸಿ ವಾರ್ತೆ ನೀಡುವಂತೆ ಆದೇಶಿಸಿದ್ದರು.

ಕುರುಕ್ಷೇತ್ರ ಯುದ್ಧ ಮುಗಿದ ನಂತರ ಧೃತರಾಷ್ಟ್ರನಾದಿಯಾಗಿ ಬದುಕುಳಿದವರು. ಪ್ರಸ್ತುತ ಮರಣಿಸಿದ ಬಂಧು ಬಾಂಧವರನ್ನು ನೋಡಲು ಇಚ್ಛಿಸಿದಾಗ ಎಲ್ಲರನ್ನೂ ಗಂಗಾತಟಕ್ಕೆ ಕರೆದುಕೊಂಡು ಹೋಗಿ ದಾನಾಸಕ್ತರಾಗುವಂತೆ ತಿಳಿಸಿ ಗತಿಸಿದ ವೀರರನ್ನು ಒಬ್ಬೊಬ್ಬರಾಗಿ ನದಿಯಿಂದ ಮೇಲೆ ಬಂದು ದರ್ಶನ ನೀಡಬೇಕೆಂದಾಗ - ವೇದವ್ಯಾಸರ ಅಪ್ಪಣೆಯಂತೆ - ಕಾಮ, ಕ್ರೋಧ, ಲೋಭ, ಮದ, ಮತ್ಸರ ವರ್ಜಿತರಾದ ಅವರೆಲ್ಲರೂ ದಿವ್ಯವಸ್ತ್ರಧಾರಕರಾಗಿ ಪರಸ್ಪರ ಕುಶಲ ಸಂಭಾಷಣೆ ಮಾಡುತ್ತಾ ಆಸಕ್ತರಿಗೆ ದರ್ಶನ ನೀಡಿ ನದಿಯಲ್ಲಿಳಿದು ಮಾಯವಾದ ಘಟನೆಯನ್ನು ಸೃಷ್ಟಿಸಿದವರು ವೇದವ್ಯಾಸರು.

ಪ್ರಸ್ತುತ ಆಷಾಢ ಮಾಸದ ಪೌರ್ಣಿಮೆಯಂದೆ ಭೂಲೋಕದಲ್ಲಿ ಅವತರಿಸಿ, ಅಚಿಂತ್ಯಾದ್ಭುತ ಕಾರ್ಯಗಳನ್ನು ಮಾಡಿದ ಜಗದ್ಗುರು ಶ್ರೀ ವೇದವ್ಯಾಸರ ಜಯಂತಿದಿನದಂದು ಅವರನ್ನು ಪೂಜಿಸಬೇಕಾದ ಹೊಣೆ - ಸನಾತನ ಧರ್ಮದ ನೆರಳಲ್ಲಿ ಬಾಳುತ್ತಿರುವ ನಮ್ಮೆಲ್ಲರ ಭಕ್ತಿ ಭಾವದ ಸಂಕೇತ. ಅವರ ಪುಣ್ಯ ಸ್ಮರಣೆಯೇ ಪಾಪನಾಶಕವಾಗುವುದು.

★★★★★

ಪುಷ್ಕರಂ ಪುಷ್ಕರಂ ಗಂತುಂ
ಪುಷ್ಕರಂ ಪುಷ್ಕರೇ ತಪಃ ।
ಪುಷ್ಕರಂ ಪುಷ್ಕರೇ ದಾನಂ
ವಸ್ತು ಚೈವ ಸುದುಷ್ಕರಂ ॥
ತ್ರೀಣಿ ಶೃಂಕಾಣಿ ಶುಭ್ರಾಣಿ ।
ತ್ರೀಣಿ ಪ್ರಶ್ರವಣಾನಿ ಚ ॥

ಪದ್ಮಪುರಾಣ, ಆದಿತ್ಯಪುರಾಣ
ಮಹಾಭಾರತ - ವನಪರ್ವ

# ಪುಷ್ಕರ

- ಆದ್ಯರಾಮಾಚಾರ್ಯ.

ಪುಷ್ಕರಕ್ಕೆ ಹೋಗುವುದು ಪೂರ್ವ ಸುಕೃತದಿಂದ ಮಾತ್ರ ಸಾಧ್ಯ. ಅಲ್ಲಿ ತಪಗೈಯುವುದೂ ಒಂದು ವಿಶೇಷ. ಅದು ಸಾಮಾನ್ಯದ ಮಾತಲ್ಲ. ಅಲ್ಲಿ ದಾನ ಮಾಡುವುದೂ ಸಹ ಮಹಿಮಾತೀತ ಎಂದೆನಿಸುವುದು. ಪುಷ್ಕರದಲ್ಲಿ ವಾಸ ಮಾಡುವುದರಿಂದ ಸಕಲ ಪಾಪಗಳೂ ನಿವಾರಣೆಯಾಗುವುವು. ಬಹು ಪ್ರಾಚೀನ ಕಾಲದಿಂದಲೂ ಈ ತೀರ್ಥವು ಸಿದ್ಧಿಯ ತಾಣವೆನಿಸಿರುವುದು. ಈ ಕ್ಷೇತ್ರದ ಮಹಿಮೆ ಅಪಾರವಾದುದು. ದೇವತೆಗಳಲ್ಲಿ ಹೇಗೆ ಮಧುಸೂದನನು ಶ್ರೇಷ್ಠನೆಂದೆನಿಸಿಕೊಳ್ಳುವನೋ ಹಾಗೆಯೇ ತೀರ್ಥಗಳಲ್ಲಿ ಪುಷ್ಕರವು ಆದ್ಯತೀರ್ಥವೆಂದೆನಿಸಿಕೊಂಡಿರುವುದು. ಕಾರ್ತೀಕ ಪೌರ್ಣಿಮೆಯ ದಿನ ಈ ತೀರ್ಥದಲ್ಲಿ ಸ್ನಾನ ಮಾಡಿದಲ್ಲಿ ನೂರಾರು ವರುಷಗಳ ಕಾಲ ಅಗ್ನಿಹೋತ್ರ ನಡೆಸಿದ ಪುಣ್ಯವು ಲಭಿಸುವುದು.

ಪ್ರಯಾಗವು ಯಾವ ರೀತಿಯಲ್ಲಿ ತೀರ್ಥರಾಜ ಎಂದೆನಿಸಿಕೊಳ್ಳುವುದೋ ಅದೇ ರೀತಿಯಲ್ಲಿ ಈ ಪುಷ್ಕರವೂ ಸಹ ಸಕಲ ತೀರ್ಥಗಳಿಗೆ ಗುರುಸ್ಥಾನದಲ್ಲಿರುವುದು. ಪಂಚಸರೋವರ ಹಾಗೂ ಪಂಚತೀರ್ಥಗಳಲ್ಲಿ ಪುಷ್ಕರವನ್ನು ಸ್ಮರಿಸಲಾಗುವುದು. ಕುರುಕ್ಷೇತ್ರ, ಪುಷ್ಕರ, ಗಯಾ, ಪ್ರಭಾಸ - ಇವುಗಳಂತೆ ಮಾನಸ ಸರೋವರ, ಪುಷ್ಕರ ಸರೋವರ, ಬಿಂದು ಸರೋವರ, ನಾರಾಯಣ ಸರೋವರ, ಪಂಪಾ ಸರೋವರ ಎಂಬ ಹೆಸರುಗಳು ಪರಮ ಪವಿತ್ರ ಸ್ಥಳಗಳೆಂದೆನಿಸಿಕೊಂಡಿರುವವು.

ಪುಷ್ಕರದ ದಂಡೆಗುಂಟ ಗೌಘಾಟ, ಬ್ರಹ್ಮಘಾಟ, ಕಪಾಲಮೋಚನಾಘಾಟ, ಯಜ್ಞಘಾಟ, ಬದರೀಘಾಟ, ಕೋಟಿತೀರ್ಥ ಘಾಟ - ಎಂಬ ಸ್ನಾನಘಟ್ಟಗಳಿರುವವು. ಪುಷ್ಕರದಿಂದ ಸರಸ್ವತಿ ನದಿಯು ಹರಿಯುತ್ತದೆ. ಮುಂದೆ ಅದು ಸಬರಮತಿಯನ್ನು ಕೂಡಿಕೊಳ್ಳುತ್ತದೆ.

ಪುಷ್ಕರದಲ್ಲಿ ಮೂರು ಭಾಗಗಳಿವೆ. ಮೊದಲನೆಯದನ್ನು ಜ್ಯೇಷ್ಠ ಬ್ರಹ್ಮದೇವನ ಸ್ಥಾನವೆಂದು ಭಾವಿಸಿದರೆ, ಮಧ್ಯಭಾಗವನ್ನು ವಿಷ್ಣು ಎಂದು ಕೊನೆಯ ಭಾಗವನ್ನು ರುದ್ರ ಎಂದೂ ಭಾವಿಸಲಾಗುತ್ತಿದೆ. ಈ ಪುಷ್ಕರಕ್ಷೇತ್ರದ ಪ್ರಧಾನದೇವತೆ ಎಂದರೆ ಚತುರ್ಮುಖ ಬ್ರಹ್ಮದೇವನು. ಆತನ ಅಕ್ಕಪಕ್ಕಗಳಲ್ಲಿ ಸರಸ್ವತಿ ಹಾಗೂ ಗಾಯತ್ರಿದೇವಿಯರ ಮಂದಿರಗಳಿವೆ. ಅನಂತರ ಸನಕಾದಿ ಮುನಿ ಮಂದಿರಗಳನ್ನು ಕಾಣುತ್ತೇವೆ. ಇಲ್ಲಿ ನಾರದ ಮುನಿಗಳ ಮಂದಿರವೂ ಇದೆ. ಆನೆಯ ಮೇಲೆ ಕುಳಿತ ಕುಬೇರನ ದೇವಮಂದಿರವನ್ನೂ ಸಹ ಇಲ್ಲಿ ನಾವು ಕಾಣುತ್ತೇವೆ.

ಪುಷ್ಕರದ ಎರಡನೇ ಸ್ಥಾನದ ದೇವಮಂದಿರವೆಂದರೆ ಬದರೀ ನಾರಾಯಣನ ಮಂದಿರ. ಈ ಮಂದಿರದ ಪರಿಸರದಲ್ಲಿದ್ದ ಹನ್ನೆರಡು ದೇವಾಲಯಗಳು ಮಹಮ್ಮದೀಯರ ಆಳ್ವಿಕೆಯಲ್ಲಿ ನಾಶವಾಗಿ ಹೋಗಿದ್ದವು. ಆದರೂ ಸಹ ಸನಾತನ ಧರ್ಮಿಗಳು ಪುನಃ ಆ ದೇವಮಂದಿರಗಳು ಕಾಣುವಂತೆ ಮಾಡಿರುವುದೆಂದು ವಿಶೇಷದ ಸಂಗತಿಯೆನಿಸುವುದು. ಹೊರಭಾಗದಲ್ಲಿ ಆತ್ಮೇಶ್ವರ ಮಹಾದೇವನ ಮಂದಿರವು ಪ್ರಧಾನ ಸ್ಥಾನದಲ್ಲಿದೆ. ಈ ದೇವನನ್ನು ಕಪಾಲೇಶ್ವರನೆಂದೂ ಕರೆಯುತ್ತಾರೆ. ಇದೇ ಪರಿಸರದಲ್ಲಿ ಶ್ರೀ ರಂಗನಾಥನ ಮಂದಿರ, ಶ್ರೀರಾಮ, ವೈಕುಂಠ ಮಂದಿರಗಳಿವೆ. ಇವು ದಕ್ಷಿಣ ಭಾರತದ ಶೈಲಿಯಲ್ಲಿ ರಚಿತವಾಗಿವೆ. ಇದಲ್ಲದೆ ಪುಷ್ಕರದ ದಂಡೆಗುಂಟ ಅನೇಕ ಚಿಕ್ಕಪುಟ್ಟ ದೇವಮಂದಿರಗಳಿವೆ. ಯಾತ್ರಿಕರು ಬಹು ಶ್ರದ್ಧೆಯಿಂದ ಈ ತೀರ್ಥಕ್ಕೆ ಪ್ರದಕ್ಷಿಣೆ ಬರುವ ಸಂಪ್ರದಾಯವಿದೆ. ವಲ್ಲಭಾಚಾರ್ಯ ಪಂಥದವರ ಒಂದು ಶಾಖೆಯೂ ಸಹ ಸರೋವರದ ಇನ್ನೊಂದು ಭಾಗದಲ್ಲಿದೆ. ಪುಷ್ಕರದ ಸಮೀಪದಲ್ಲಿ ಶುದ್ಧವಾಪಿ ಗಯಾಕುಂಡವಿದೆ. ಯಾತ್ರಾರ್ಥಿಗಳು ಇಲ್ಲಿಯೇ ಪಿತೃಕಾರ್ಯವನ್ನು ಮಾಡುತ್ತಾರೆ.

ಪುಷ್ಕರದಿಂದ ಹರಿವ ಸರಸ್ವತಿ ನದಿಯ ಸ್ನಾನಕ್ಕೆ ವಿಶೇಷ ಮಹತ್ವವಿದೆ. ಈ ಪ್ರವಾಹವು ಪ್ರಾಚೀನ ಸರಸ್ವತಿ ಎಂದೆನಿಸಿಕೊಂಡಿದೆಯಲ್ಲದೆ ಸುಪ್ರಭಾ, ಕಾಂಚನಾ, ವಿಶಾಲಿಕಾ, ನಂದಾ ಎಂಬ ಹೆಸರುಗಳಿಂದಲೂ ಕರೆಸಿಕೊಂಡಿದೆ. ಒಂದು ಕಾಲದಲ್ಲಿ ಈ ಸರೋವರದಲ್ಲಿ ಮೊಸಳೆಗಳು ಸಾಕಷ್ಟು ಪ್ರಮಾಣದಲ್ಲಿದ್ದವು. ಇದೇ ಸ್ಥಳದಲ್ಲಿ ಗಜೇಂದ್ರನಿಗೆ ಮೋಕ್ಷಪ್ರಾಪ್ತಿಯಾಯಿತೆಂಬ ಕಥೆಯೂ ಇದೆ. ಆದರೆ ಈಗ ಯಾತ್ರಿಕರಿಗೆ ತೊಂದರೆಗಳಾಗಬಾರದೆಂಬ ಕಾರಣದಿಂದ ಮೊಸಳೆಗಳನ್ನೆಲ್ಲ ತೆಗೆದು ಹಾಕಲಾಗಿದೆ. ನಿರ್ಭೀತಿಯಿಂದ ಸ್ನಾನ ಮಾಡಲು ಅನುಕೂಲ ಮಾಡಿಕೊಡಲಾಗಿದೆ.

ಒಂದು ಕಾಲದಲ್ಲಿ ಈ ಸ್ಥಳದಲ್ಲಿ ವಜ್ರನಾಭನೆಂಬ ದೈತ್ಯನು ವಾಸ ಮಾಡುತ್ತಿದ್ದನಂತೆ. ಆತ ಮಕ್ಕಳನ್ನು ಸಂಹರಿಸುತ್ತಿದ್ದ. ಬ್ರಹ್ಮದೇವನಿಗೆ ಇದೇ ಸ್ಥಳದಲ್ಲಿ ಯಜ್ಞಮಾಡಬೇಕೆಂಬ ಅಪೇಕ್ಷೆಯಾದಾಗ

## ತಿರುಮಲ ತಿರುಪತಿ ದೇವಸ್ಥಾನಗಳು, ತಿರುಪತಿ.

# ಕಲ್ಯಾಣ ಮಂಟಪಗಳನ್ನು ನೀಡಲು ಮಾರ್ಗದರ್ಶಕ ಸೂತ್ರಗಳು

ಶ್ರೀ ವೆಂಕಟೇಶ್ವರಸ್ವಾಮಿಯ ಭಕ್ತ ಜನರ ಸೌಕರ್ಯಾರ್ಥವಾಗಿ ತಿ. ತಿ. ದೇವಸ್ಥಾನಗಳ ಆಡಳಿತ ಹಲವಾರು ಕಲ್ಯಾಣ ಮಂಟಪಗಳನ್ನು ನಿರ್ಮಿಸಿವೆ. ಇವುಗಳನ್ನು ಹಿಂದೂ ವಿವಾಹಾದಿ ಧಾರ್ಮಿಕ ಕಾರ್ಯಕ್ರಮಗಳಿಗೆ ನೀಡಲಾಗುವುದು. ಇಲ್ಲಿ ನಡೆಯುವ ಶುಭಕಾರ್ಯಗಳಿಗೆ ಸ್ವಾಮಿಯ ಅನುಗ್ರಹವಿರುತ್ತದೆ ಎಂಬುದು ಪ್ರಜೆಗಳ ನಂಬಿಕೆ. ಜಿಲ್ಲಾ ಕೇಂದ್ರಗಳಲ್ಲಿ ರೂ. 4000/- ಮುನಿಸಿಪಲ್ ಪಟ್ಟಣಗಳಲ್ಲಿ ರೂ. 2000/- ಮಂಡಲಗಳಲ್ಲಿ ದೊಡ್ಡವು ರೂ. 1500/- ಮಿಕ್ಕವು ರೂ. 1000/- (ಬೆಂಗಳೂರು, ಹೈದರಾಬಾದ್, ಕಲ್ಯಾಣಮಂಟಪಗಳ ಹೊರತು) ಎಂದು ಶುಲ್ಕವನ್ನು ನಿಶ್ಚಯಿಸಿದ್ದಾರೆ. ವಿವಾಹಗಳಿಗೆಂದೇ ಅಲ್ಲದೆ ಕೆಳಕಂಡ ಕಾರ್ಯಕ್ರಮಗಳಿಗೂ ಕಲ್ಯಾಣಮಂಟಪಗಳನ್ನು ಬಾಡಿಗೆಗೆ ಪಡೆಯಬಹುದು.

1. ಸ್ವಾಮಿಜೀಯವರುಗಳ ಉಪನ್ಯಾಸಗಳು, ಪ್ರವಚನಗಳು, 2. ಶ್ರೀರಾಮನವಮಿ ಉತ್ಸವಗಳು, 3. ನವರಾತ್ರಿ ಉತ್ಸವಗಳು, 4. ಗಣೇಶ ಚತುರ್ಥಿ ಉತ್ಸವಗಳು, 5. ಅಯ್ಯಪ್ಪ ಭಜನೆ, 6. ಹರಿಕಥೆ, 7. ಕುಂಕುಮಾರ್ಚನೆ, 8. ಅನ್ನಮಯ್ಯ ಭಜನೆ, 9. ವ್ರತಗಳು.

**ಕುಟುಂಬ ಕಾರ್ಯಕ್ರಮಗಳಿಗೆ - 6 ಗಂಟೆಯ ಅವಧಿಗೆ - 25% ಶುಲ್ಕ.**

1. ನಾಮಕರಣ, 2. ಅನ್ನಪ್ರಾಶನ, 3. ಕಿವಿಚುಚ್ಚುವಿಕೆ, 4. ಉಪನಯನ, 5. ವ್ರತಗಳು, 6. ನಿಶ್ಚಿತಾರ್ಥ, 7. ಮದುವೆ ಮಾತು ಮತ್ತಿತರ ಕಾರ್ಯಕ್ರಮಗಳು.

**ಕುಟುಂಬ ಕಾರ್ಯಕ್ರಮಗಳಿಗೆ - 12 ಗಂಟೆಯ ಅವಧಿಗೆ - 50% ಶುಲ್ಕ.**

ಮೇಲಿನ ಕಾರ್ಯಕ್ರಮಗಳಿಗೆಲ್ಲ ಅಡಿಗೆ, ಊಟದ ಏರ್ಪಾಡುಗಳನ್ನು ಮಾಡಿಕೊಳ್ಳಬಹುದು. ವಿವಾಹಕ್ಕೆ ಮಾತ್ರ ಈ ಶುಲ್ಕ ಅನ್ವಯಿಸದು.

**ಇಲ್ಲಿ ನಡೆಸಲು ನಿಷೇಧವಿರುವ ಕಾರ್ಯಕ್ರಮಗಳು**

1. ಸರ್ಕಾರಿ ವಿಭಾಗಗಳು, ಸಂಸ್ಥೆಗಳು, 2. ಜಿಲ್ಲೆಯ ಕಲೆಕ್ಟರೇಟ್, 3. ಕಾರ್ಪೊರೇಷನ್, 4. ಚುನಾವಣೆ, 5. ಮತಗಣನೆ, 6. ರಾಜಕೀಯ ಸಂಸ್ಥೆಗಳು, 7. ಹಿಂದು ವೇತರ ಸಂಸ್ಥೆಗಳು.

**ವಿವರಗಳಿಗಾಗಿ ಸ್ಥಳೀಯ ಕಲ್ಯಾಣ ಮಂಟಪಗಳ ಮ್ಯಾನೇಜರ್ ಅವರನ್ನು ವಿಚಾರಿಸಬೇಕು.**

**ಕಾರ್ಯನಿರ್ವಹಣಾಧಿಕಾರಿ.**

ಕಮಲದ ನಾಳದಿಂದ ಆತನನ್ನು ಸಂಹರಿಸಿದನಂತೆ. ಇದರಿಂದಾಗಿ ಈ ತೀರ್ಥಕ್ಕೆ ''ಪುಷ್ಕರ ಸರೋವರ'' ಎಂದು ಹೆಸರು ಬರುವಂತಾಯಿತೆಂದು ಪದ್ಮಪುರಾಣವು ತಿಳಿಸುತ್ತದೆ.

ಬ್ರಹ್ಮದೇವನ ಯಜ್ಞನಿಮಿತ್ತವಾಗಿ ಋಷಿ ಮುನಿಗಳೆಲ್ಲರ ಆಗಮನವಾದಾಗ ಸರಸ್ವತೀ ದೇವಿ ಬರಲು ತಡವಾದುದರಿಂದ ಮುಹೂರ್ತವು ಮೀರಿ ಹೋಗಬಾರದೆಂದು ಬ್ರಹ್ಮನು ಗಾಯತ್ರಿ ದೇವಿಯನ್ನು ವಿವಾಹವಾಗಿ ಯಜ್ಞಕಾರ್ಯವನ್ನು ಪ್ರಾರಂಭಿಸಿದನಂತೆ. ಸರಸ್ವತಿ ದೇವಿಯು ಬಂದು ಅದನ್ನೆಲ್ಲ ಕಂಡು ಕುಪಿತಳಾಗಿ ಪರ್ವತದ ತುದಿಭಾಗಕ್ಕೆ ಹೋಗಿ ಅಲ್ಲಿ ಅವಳು ಬೇರೊಂದು ಯಜ್ಞವನ್ನಾಚರಿಸಿದಳಂತೆ. ಆಗ ಬ್ರಹ್ಮದೇವನ ನಾಶಿಕದಿಂದ ಭಗವಂತನ ವರಾಹ ರೂಪದಿಂದ ಪ್ರಕಟವಾದನೆಂದು ಪುರಾಣಗಳು ತಿಳಿಸುತ್ತವೆ.

ಪರಮ ಪವಿತ್ರವಾದ ಈ ಪುಷ್ಕರ ತೀರ್ಥಕ್ಕೆ ಹೋಗಿ ಬರಲು ಪಶ್ಚಿಮ ರೈಲ್ವೆ ವಿಭಾಗದ ಅಹಮದಾಬಾದ - ದಿಲ್ಲಿ ಈ ಮಾರ್ಗದಲ್ಲಿ ಅಜಮೇರ ಎಂಬ ರೈಲು ನಿಲ್ದಾಣದಲ್ಲಿ ಇಳಿಯಬೇಕಾಗುತ್ತದೆ. ಅಲ್ಲಿಂದ ಕೇವಲ ಏಳು ಮೈಲಿನ ಅಂತರದಲ್ಲಿ ಈ ಪವಿತ್ರ ತೀರ್ಥವಿದೆ. ರೈಲು ನಿಲ್ದಾಣದ ಹೊರಭಾಗದಲ್ಲಿ ಅನೇಕ ಧರ್ಮಛತ್ರಗಳಿವೆ. ಅದರಲ್ಲಿ ಟೀಕಮಚಂದ ಎಂಬ ಹೆಸರಿನ ಛತ್ರವು ಬಹು ಚನ್ನಾಗಿದೆ. ಪುಷ್ಕರಕ್ಕೆ ಹೋಗಲು ಬಸ್ಸುಗಳು, ಟ್ಯಾಕ್ಸಿ ಹಾಗೂ ಆಟೋರಿಕ್ಷಾಗಳು ದೊರೆಯುತ್ತವೆ. ಪುಷ್ಕರದಲ್ಲಿಯೂ ಸಹ ಯಾತ್ರಿಕರಿಗೆ ತಂಗಲು ದಾನಿಗಳು ಕಟ್ಟಿಸಿದ ಅನೇಕ ಛತ್ರಗಳು ಇವೆ. ಶ್ರೀಕೃಷ್ಣನು ಮಧುರೆಯಿಂದ ಇದೇ ಮಾರ್ಗವಾಗಿ ದ್ವಾರಕಾ ನಗರಕ್ಕೆ ತನ್ನ ಜನರನ್ನು ಕರೆದುಕೊಂಡು ಹೋಗಿದ್ದಾನೆ. ಜೀವನದಲ್ಲಿ ಪುಷ್ಕರ ತೀರ್ಥ ಸ್ನಾನವು ಮೋಕ್ಷಕಾರಕ ಎಂಬ ಮಾತನ್ನು ಪುನಃ ಹೇಳಬೇಕೇ ?

★★★★★

# ನೃತ್ಯಕ್ಷೇತ್ರಕ್ಕೆ ದಾಸರ ಕೊಡುಗೆ

- ರಘುಸುತ.

ಭಕ್ತಿ ಪಂಥದ ಒಂದು ಭಾಗವೇ ಹರಿದಾಸ ಸಾಹಿತ್ಯ. ಮಧ್ವಾಚಾರ್ಯರ ಶಿಷ್ಯ ಪರಂಪರೆಯವರಾದ ಈ ಹರಿದಾಸರು ಅಚ್ಚ ಕನ್ನಡಿಗರಾಗಿದ್ದು, ಅಂದಿನ ಕರ್ನಾಟಕದ ಎಲ್ಲೆಡೆ ಸುತ್ತಾಡಿ, ಭಕ್ತಿಯನ್ನು ಎಲ್ಲೆಡೆ ಹರಡಿದರು. ತಮ್ಮ ಕೀರ್ತನೆಗಳು, ಸುಳಾದಿಗಳು, ಉಗಾಭೋಗ ಗಳಿಂದ ಸುಲಭ ಕನ್ನಡದಲ್ಲಿ ರಚಿಸಿದ ಈ ಕೃತಿಗಳಿಂದ ಜನಸಾಮಾನ್ಯರಲ್ಲಿ ಭಗವದ್ಭಕ್ತಿಯನ್ನು ಹರಡಿದರು. ಈ ಸಾಹಿತ್ಯ ರಚನೆಗಳು ಸಂಸ್ಕೃತಿಯ ಆಧಾರ ಸ್ತಂಭಗಳಾಗಿದ್ದುದೇ ಅಲ್ಲದೆ ಕಲೆ, ಶಿಲ್ಪಕಲೆ, ವಾಸ್ತು, ಸಾಹಿತ್ಯ, ಸಂಗೀತ, ನೃತ್ಯ - ಇತ್ಯಾದಿ ಎಲ್ಲವುಗಳ ಮೇಲೂ ಪ್ರಭಾವ ಬೀರಿದುವು. ದೃಶ್ಯ ಹಾಗೂ ಶ್ರವ್ಯ ಮಾಧ್ಯಮವಾದ ನೃತ್ಯವೂ ಕೂಡ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿಯೂ ಕೂಡ ಪ್ರಭಾವಿತಗೊಂಡವು. ಈ ಪ್ರಭಾವ ಇಂದಿಗೂ ಉಳಿದು ಬಂದಿದೆ.

ಈ ಹರಿದಾಸ ಸಾಹಿತ್ಯ ರಚನೆಯಾಗಿ, ಪ್ರಭಾವಗೊಂಡಿದ್ದುದು 13 ನೇ ಶತಮಾನದಿಂದ 18 ನೇ ಶತಮಾನದವರೆಗೆ ಇದು ನಾಲ ಘಟ್ಟಗಳಲ್ಲಿ ಹರಡಿದೆ-

1. 13 ರಿಂದ 16 ನೇ ಶತಮಾನ.

2. 16 ರಿಂದ 18 ನೇ ಶತಮಾನ.

3. ಮತ್ತು 4. 18 ರಿಂದ 19 ನೇ ಶತಮಾನದ ಕೊನೆಯವರೆಗೆ.

ಮೊದಲನೆ ಘಟ್ಟದಲ್ಲಿ ಪುರಂದರರ ಪೂರ್ವ ಸಾಹಿತ್ಯವಿದೆ. ನರಹರಿ ತೀರ್ಥರು, ಶ್ರೀಪಾದರಾಯರು, ವ್ಯಾಸತೀರ್ಥರು ಈ ಘಟ್ಟದ ಮುಖ್ಯರು.

ಎರಡನೇ ಘಟ್ಟ ದಾಸಸಾಹಿತ್ಯದ ಉಚ್ಛ್ರಾಯ ಕಾಲ. ಇದು ಕೃಷ್ಣದೇವರಾಯನ ಆಳ್ವಿಕೆಯ ಕಾಲವಾಗಿದ್ದು, ಇಲ್ಲಿ ಪ್ರಮುಖರು. ಪುರಂದರ ದಾಸ, ಕನಕದಾಸರು ಮುಂತಾದವರು.

ಮೂರನೇ ಮತ್ತು ನಾಲ್ಕನೇ ಘಟ್ಟದಲ್ಲಿ ವಿಜಯದಾಸರು ಇತ್ಯಾದಿಯವರು ಭಾಗವತ ಪರಂಪರೆಯ ಪುರೋಭಿವೃದ್ಧಿಗೆ ಶ್ರಮಿಸಿದರು. ಇದೇ ಕಾಲದಲ್ಲಿಯೇ ಗುರುಪ್ರಾಣೇಶ ವಿಠಲರು ಪ್ರಮುಖರು. ಜಗನ್ನಾಥದಾಸರು, ಮಹೀಪತಿದಾಸರು, ಪ್ರಸನ್ನ ವೇಂಕಟದಾಸರು ಈ ಕಾಲದಲ್ಲಿದ್ದರು.

ಪ್ರಾರಂಭದಲ್ಲಿ ಈ ಹರಿದಾಸರು ಶ್ರೀರಂಗದ ನೇರ ಸಂಬಂಧವನ್ನು ಹೊಂದಿದ್ದರಿಂದ 'ರಂಗವಿಠಲ' ಎಂಬ ಅಂಕಿತವನ್ನು ಹೊಂದಿರುತ್ತಿದ್ದರು. ನಂತರ ಪಂಡರಾಪುರದ ವಿಠಲನ ಅಂಕಿತವಾದ 'ವಿಠಲ' ಅಥವಾ ತಮ್ಮ ಅಧಿದೈವದ ಅಂಕಿತವನ್ನು ಹೊಂದ ತೊಡಗಿದರು. ಶ್ರೀರಂಗದಲ್ಲಿದ್ದಾಗಿನ ಈ ಕೆಲವು ಹರಿದಾಸರು, ಅಲ್ಲಿನ ಶ್ರೀವೈಷ್ಣವ ಧರ್ಮದಿಂದ ಪ್ರಭಾವಿತರಾದರು. ಇಲ್ಲಿನ ಶ್ರೀವೈಷ್ಣವ ಪರಂಪರೆಯಲ್ಲಿ 'ಅರೈಯರ್' ಪರಂಪರೆ ಯವರು ಇದ್ದರು, ಅನೇಕ ಶ್ರೀವೈಷ್ಣವ ದೇವಾಲಯಗಳಲ್ಲಿ 'ಅರೈಯರ್' ಪರಂಪರೆ ಈಗಲೂ ಪ್ರಚಲಿತದಲ್ಲಿದೆ. ಈ ಅರೈಯರ್‌ಗಳು ಭಗವಂತನನ್ನು ಒಲಿಸಿಕೊಳ್ಳಲು ನಾಲಾಯಿರ ದಿವ್ಯಪ್ರಬಂಧವನ್ನು ರಾಗ, ತಾಳ ಸಹಿತವಾಗಿ ಹೇಳುತ್ತಾ, ನೃತ್ಯ ಮಾಡುತ್ತಾ ಭಗವಂತನ ಅನುಗ್ರಹ ಪಡೆಯಲು ಸತತವಾಗಿ ಸ್ತೋತ್ರ ಮಾಡುತ್ತಿದ್ದರು. ಇದು ಜನಸಾಮಾನ್ಯರನ್ನು



ಸುಲಭವಾಗಿ ತಲುಪುತ್ತಿತ್ತು. ಇದೇ ರೀತಿಯಲ್ಲಿ ಹರಿದಾಸರೂ ಕೂಡ ಈ ನೃತ್ಯ, ಸಂಗೀತ ಮಾಧ್ಯಮಗಳ ಮುಖಾಂತರವೇ ಪರಮಾತ್ಮನ ಅಡಿದಾವರೆಗಳಲ್ಲಿ ಸರ್ವಸಮರ್ಪಣಾ ಭಾವವನ್ನು ವ್ಯಕ್ತಮಾಡುತ್ತಿದ್ದರು.

ಹರಿದಾಸರ ಕಾಲದವರೆಗೆ ಭಾರತದಲ್ಲಿ ಪ್ರಚಲಿತವಾಗಿದ್ದ ನೃತ್ಯ ಪರಂಪರೆಯು ಭಾರತಾದ್ಯಂತ ಒಂದೇ ರೀತಿಯದ್ದಾಗಿತ್ತು ಎಂದು ಹೇಳಲಾಗುತ್ತದೆ. ದೇವಾಲಯದ ಶಿಲ್ಪಗಳು, ಆಗಿನ ಸಾಹಿತ್ಯ ಇವುಗಳನ್ನು ಪರೀಕ್ಷಿಸಿದಾಗ ನೃತ್ಯವು ಬಹುವಾಗಿ ಅರಮನೆಗೆ ಹಾಗೂ ಇತರೇ ಅಧಿಕಾರವರ್ಗದವರಿಗೇ ಸೀಮಿತವಾಗಿತ್ತು. ದೇವಾಲಯಗಳಲ್ಲಿ ನಡೆಯುವ ನೃತ್ಯ ಪ್ರದರ್ಶನಗಳೇ ಮುಖ್ಯವಾದುದಾಗಿತ್ತು. ಅಂದರೆ ಸಮಾಜದ ಉನ್ನತ ವರ್ಗದವರ ಆಶ್ರಯವೇ ಹೆಚ್ಚಾಗಿತ್ತು. ವಿಶೇಷ ಸಂದರ್ಭಗಳಲ್ಲಿ, ದೇವಾಲಯಗಳ ಹಬ್ಬ ಹರಿದಿನ ಉತ್ಸವಗಳ ಸಮಯದಲ್ಲಿ ಮಾತ್ರ ಒಮ್ಮೊಮ್ಮೆ ಆಹ್ವಾನವಿದ್ದವರಿಗೆ ಅಥವಾ ಆಗೀಗ ಆಹ್ವಾನವಿಲ್ಲದವರಿಗೆ ನೃತ್ಯ ಪ್ರದರ್ಶನಗಳನ್ನು ನೋಡುವ ಸನ್ನಿವೇಶ ಪ್ರಾಪ್ತವಾಗುತ್ತಿತ್ತು. ಹೀಗಾಗಿ ನೃತ್ಯದ ಜನಪ್ರಿಯತೆ ಎನ್ನುವುದು ಸೀಮಿತಗೊಂಡಿತು.

ಅಲ್ಲದೆ ನೃತ್ಯಪದ್ಧತಿಗಳು, ವೈಶಿಷ್ಟ್ಯಗಳು ಭರತ ಮುನಿಯ ನಾಟ್ಯಶಾಸ್ತ್ರಾಧಾರಿತ ವಾಗಿಯೇ ಇದ್ದುದರಿಂದ ಜನ ಸಮುದಾಯದ ಮಾಧ್ಯಮವಾಗಿರಲಿಲ್ಲ. ಇದು ನೃತ್ಯದ ಜನಪ್ರಿಯತೆಗೆ ಅಡ್ಡಿಯಾಗಿತ್ತು. ಅಲ್ಲದೆ ಆಗೀಗ ಸಿದ್ಧಗೊಳ್ಳುತ್ತಿದ್ದ ನೃತ್ಯವನ್ನು ಕುರಿತಾದ ಸಂಸ್ಕೃತ ಹಾಗೂ ಸ್ಥಳೀಯ ಭಾಷೆಯ ಕೃತಿಗಳೂ ಕೂಡ ಇದೇ ಜಾಡನ್ನು ಹಿಡಿದಿದ್ದುವು. ನೃತ್ಯವು ಪ್ರಮುಖವಾಗಿ ದೇವ, ದೇವಿಯರಿಗೆ ಸಂಬಂಧಪಟ್ಟುದ್ದರಿಂದ, ಪ್ರಮುಖವಾಗಿ ಸ್ತ್ರೀಯರೇ ಇಂತಹ ನೃತ್ಯಗಳನ್ನು ನಡೆಸುತ್ತಿದ್ದರು. ಹೀಗಾಗಿ ದೇವಾಲಯಗಳಲ್ಲಿ ದೇವದಾಸಿ ಪದ್ಧತಿಯು ರೂಢಿಗೆ ಬಂದಿತು. ಅಂತೆಯೇ ಶೃಂಗಾರ ಇತ್ಯಾದಿ ನವರಸಗಳು ನೃತ್ಯದ ಪ್ರಮುಖ ಅಂಶಗಳಾಗತೊಡಗಿದುವು.

ಹೀಗಿದ್ದಂತಹ ನೃತ್ಯಕಲೆಯನ್ನು ಜನರ ಬಳಿಗೆ ತೆಗೆದುಕೊಂಡು ಹೋದ ಕೀರ್ತಿ ಹರಿದಾಸರಿಗೆ ಸೇರಬೇಕು.

ಹರಿದಾಸರ ಮುಖ್ಯ ಗುರಿ, ಭಗವಂತನ ಧ್ಯಾನ, ಅವನ ಮಹಿಮೆಯ ಹಿರಿಮೆಯನ್ನು ತಿಳಿಸುವ ಸಾಹಿತ್ಯ ಸೃಷ್ಟಿ. ಸಾಮಾನ್ಯ ಜನತೆಗೂ ಅರ್ಥವಾಗುವಂತಹ ಸಾಹಿತ್ಯವನ್ನು ಕೀರ್ತನೆ, ಸುಳಾದಿ, ಉಗಾಭೋಗಗಳ ಮುಖಾಂತರ ರಚಿಸಿ, ಅವನ್ನು ಜನ ಸಾಮಾನ್ಯರಿಗೆ ತಲುಪಿಸುವ ಕಾರ್ಯವನ್ನು ಈ ಹರಿದಾಸರು ಮಾಡಿದರು. ತಮ್ಮ ರಚನೆಗಳನ್ನು ಜನರಿಗೆ ತಲುಪಿಸುವ ಕಾರ್ಯವನ್ನು ಇವರು ತಮ್ಮ ಕರ್ತವ್ಯವೆಂದು ತಿಳಿದುದೇ ಅಲ್ಲದೆ ಇದೂ ಕೂಡ ಪರಮಾತ್ಮನ ಸೇವೆ ಎಂದು ತಿಳಿದರು. ಬಹಳ ಮಟ್ಟಿಗೆ ಶ್ರೀರಾಮಾನುಜರು ದೇವಾಲಯದ ಗೋಪುರವೇರಿ ಅಷ್ಟಾಕ್ಷರಿ ಮಂತ್ರವನ್ನು ಜನಸಾಮಾನ್ಯರೂ ಅರಿತು ಮೋಕ್ಷ ಪಡೆಯಲಿ ಎನ್ನುವಂತಹ ಅವರ ಜೀವನದ ಕಥನಗಳು; ಜನ ಸಾಮಾನ್ಯರಲ್ಲಿ ಭಕ್ತಿಭಾವವನ್ನು ಬಿತ್ತುವ ಹಾಗೂ ಸರ್ವರನ್ನೂ ಒಂದೇ ಎಂದು ಭಾವಿಸುವ ಅವರ ಮನೋಭಾವವನ್ನು ಹರಿದಾಸರು ತಮ್ಮ ಕೈದೀವಿಟಿಗೆಯನ್ನಾಗಿ ಮಾಡಿಕೊಂಡರು. ತಮ್ಮೊಂದಿಗೆ ಜನಸಾಮಾನ್ಯರನ್ನೂ ಮೋಕ್ಷ ಪಡೆಯಲು, ಭಗವಂತನೆಡೆಗೆ ಕರೆದೊಯ್ಯುವ ಆಂಡಾಳ್ ಹಾಗೂ ಶ್ರೀರಾಮಾನುಜರ ಮಾದರಿ ಹರಿದಾಸರ ಕಣ್ಣಲ್ಲಿ ನೆಲೆಸಿದ್ದು, ಅದನ್ನು ಪದಶಃ ಅನುಸರಿಸಿದರು. ಉಪಾಸನೆ, ಭಜನೆ, ಸಂಗೀತ, ನೃತ್ಯಗಳು - ಭಕ್ತಿಮಾರ್ಗದ ಸಾಧನಗಳು. ಪುರಂದರದಾಸರು ಹರಿದಾಸರಲ್ಲೇ ಅಗ್ರಗಣ್ಯರು. ಇವರ ತಮ್ಮ ಲಕ್ಷಾಂತರ ರಚನೆಗಳ ಮುಖಾಂತರ ಸಾಹಿತ್ಯ, ಸಂಗೀತ, ನೃತ್ಯ ಜಗತ್ತಿಗೆ ಅನುಪಮ ಸೇವೆ ಸಲ್ಲಿಸಿದ್ದಾರೆ. ಇವರು, ಕರ್ನಾಟಕ ಸಂಗೀತ ಪಿತಾಮಹರೇ ಅಲ್ಲದೆ, ಕರ್ನಾಟಕ ನೃತ್ಯದ, ಅದರಲ್ಲೂ ಸುಳಾದಿ, ಉಗಾಭೋಗಗಳು ಜನರ ಹೃದಯಕ್ಕೆ ತುಂಬಾ ಹತ್ತಿರವಾಗಲು ಕಾರಣರಾದರು. ಭಕ್ತಿಯ ಮಾರ್ಗದ ಸಾಧನಗಳಲ್ಲಿ ಇವರು ಸಂಗೀತ, ನೃತ್ಯಗಳನ್ನು ಅನುಸರಿಸಿದರು.

ಪುರಂದರದಾಸರು ವಿಜಯನಗರ ಸಾಮ್ರಾಜ್ಯದ ಸ್ವರ್ಣಯುಗವಾದ ಕೃಷ್ಣ ದೇವರಾಯನ ಕಾಲದಲ್ಲಿ ಅದರ ರಾಜಧಾನಿಯಲ್ಲಿ ಇದ್ದವರು. ಆ ಸಮಯ ಯಾವ ರೀತಿಯಲ್ಲಿ ಸ್ವರ್ಣಯುಗವೊ, ನೈತಿಕವಾಗಿ ಅಂದಿನ ಸಾಮಾಜಿಕ ಜೀವನ ಅಧಃಪತನವನ್ನು ಹೊಂದಿತ್ತು. ಜನ ಸಾಮಾನ್ಯರಲ್ಲಿ ಈ ಕಾರಣದಿಂದ ಭಕ್ತಿ ಭಾವ ಕಡಿಮೆಯಾಗ ತೊಡಗಿತ್ತು. ಇದನ್ನು ದೃಷ್ಟಿಯಲ್ಲಿರಿಸಿಕೊಂಡು, ಜನರಲ್ಲಿ ಭಕ್ತಿ ಮಾರ್ಗವನ್ನು ಬೋಧಿಸುವ ತೀರ್ಮಾನವನ್ನು ದಾಸರು ಕೈಗೊಂಡರು. ಆದಷ್ಟು ಸುತ್ತಾಡಿ, ಆದಷ್ಟು ಜನರನ್ನು ಸಂಪರ್ಕಿಸಿ, ಅವರಲ್ಲಿ ಭಕ್ತಿಯ ಬೀಜವನ್ನು ಬಿತ್ತುವ ಪ್ರಯತ್ನ ಮಾಡಿದರು. ಪರಿಣಾಮವಾಗಿ ಇವರ ರಚನೆಗಳು ಜನಸಾಮಾನ್ಯರಿಗೆ ಅದರಲ್ಲೂ ಮಕ್ಕಳನ್ನು ಈ ನೈತಿಕ ಪತನದಿಂದ ತಪ್ಪಿಸುವ, ಮುಂದಿನ ಜನಾಂಗವನ್ನು ಉತ್ತಮ ಜನಾಂಗವನ್ನಾಗಿ ಮಾಡುವ ಪಣತೊಟ್ಟರು. ಹೀಗಾಗಿ ಸಮಾಜದ ಕಟು ಟೀಕೆ ಇವರ ರಚನೆಗಳಲ್ಲಿ ಕಂಡು ಬಂದಿರುವುದೇ ಅಲ್ಲದೆ ಮಕ್ಕಳನ್ನೆ ದೃಷ್ಟಿಯಲ್ಲಿಟ್ಟುಕೊಂಡು, ಅವರಿಗೆ ಶಿಕ್ಷಣ ನೀಡುವ ತರಹದ, ಅವರನ್ನು ಸರಿದಾರಿಗೆ ತರುವ ಪ್ರಯತ್ನ ಇರುವಂತೆ ಕೆಲವು ರಚನೆಗಳು ಓದಿದಾಗ ಕಂಡುಬರುತ್ತವೆ. ಈ ದೃಷ್ಟಿಯಿಂದ ಪುರಂದರದಾಸರ ರಚನೆಗಳ ಅಧ್ಯಯನ ಸಂಶೋಧನೆ ನಡೆಯಬೇಕಾಗಿದೆ. ಇದುವರೆವಿಗೂ ವಿದ್ವಾಂಸರಾಗಲಿ, ಆಸಕ್ತರಾಗಲಿ ದಾಸರ ರಚನೆಗಳನ್ನು ಹೀಗೆ ಅವಲೋಕಿಸಿಲ್ಲ.

ದಾಸರು ವಿಜಯನಗರದಲ್ಲಿನ ದೇವಾಲಯ ಗಳಲ್ಲಿ ನಡೆಯುವ ನೃತ್ಯ ಪ್ರದರ್ಶನಗಳನ್ನು ನೋಡುತ್ತಿದ್ದಂತೆ ಹಾಗೂ ಅರಮನೆಯಲ್ಲಿ ನೃತ್ಯ ಕಾರ್ಯಕ್ರಮಗಳನ್ನು ವೀಕ್ಷಿಸುತ್ತಿದ್ದಂತೆ ಅವರು ಈ ಶಾಸ್ತ್ರದಲ್ಲಿ ಪರಿಣಿತರಾದುದೇ ಅಲ್ಲದೆ ಭರತನಾಟ್ಯದ ಶಾಸ್ತ್ರೀಯ ಹಾಗೂ ನೃತ್ಯ ಭಾಗಗಳೆರಡರ ಒಳಹೊರಗುಗಳನ್ನು ಅರಿಯುವುದರಲ್ಲಿ ಸಫಲರಾಗಿದ್ದರೆಂಬುದನ್ನು ಅವರು ರಚಿಸಿರುವ ಕೆಲವು ಕೃತಿಗಳನ್ನು ವೀಕ್ಷಿಸಿದಲ್ಲಿ ಗೊತ್ತಾಗುತ್ತದೆ. ಅವು ನೃತ್ಯಕ್ಕಾಗಿಯೇ ಬರೆದವುಗಳೆಂದು ಸ್ಪಷ್ಟವಾಗಿ ಗೋಚರ





## ಅನ್ನಮಾಚಾರ್ಯ ಜಯಂತಿ

ತಾಳ್ಳಪಾಕ ಅನ್ನಮಾಚಾರ್ಯರ 593 ನೇ
ಜಯಂತಿ ಉತ್ಸವಗಳು
8-5-2001 ರಿಂದ 10-5-2001 ರ ವರೆಗೆ
ತಿರುಪತಿಯಲ್ಲಿ
ಅನ್ನಮಾಚಾರ್ಯ ಪ್ರಾಜೆಕ್ಟ್ ವತಿಯಿಂದ
ಆಚರಿಸಲ್ಪಟ್ಟಿತು.
ತದಂಗವಾಗಿ ಪರಿಪಾಲನಾಭವನದಿಂದ
ಅನ್ನಮಾಚಾರ್ಯ ಕಲಾಮಂದಿರದ ವರೆಗೆ
ಅನ್ನಮಯ್ಯ ವಿಗ್ರಹದ ಮೆರವಣಿಗೆ,
ನಗರ ಸಂಕೀರ್ತನೆ,
ಗೋಷ್ಠಿಗಾನ,
ವಿದ್ವತ್ ಸಾಹಿತ್ಯ ಸಭೆಗಳು ನಡೆದವು.












# ಕವಿತ್ರಯ ಆಂಧ್ರ ಮಹಾಭಾರತ ಆದಿ ಸಭಾಪರ್ವ ಬಿಡುಗಡೆ



ಕವಿತ್ರಯ ಆಂಧ್ರಮಹಾಭಾರತವನ್ನು ಸವ್ಯಾಖ್ಯಾನವಾಗಿ ಪ್ರಕಟಿಸುವ ತಿ. ತಿ. ದೇವಸ್ಥಾನಗಳ ಯೋಜನೆಯಲ್ಲಿ ಮೊದಲ ಹಂತದಲ್ಲಿ ಆದಿ ಸಭಾಪರ್ವಗಳನ್ನು 12-5-2001 ರಂದು ತಿರುಪತಿಯ ಮಹತಿ ಸಭಾಂಗಣದಲ್ಲಿ ಆಂಧ್ರಪ್ರದೇಶದ ದೇವಾದಾಯ ಶಾಖಾಮಂತ್ರಿ ಶ್ರೀ ದಂಡು ಶಿವರಾಮರಾಜು ಅವರು ಬಿಡುಗಡೆ ಮಾಡಿದರು. ಮೊದಲ ಪ್ರತಿಯನ್ನು ಆಂಧ್ರಪ್ರದೇಶದ ಸಮಾಚಾರ ಶಾಖಾಮಂತ್ರಿ, ಡಾ|| ಎನ್. ಶಿವಪ್ರಸಾದ್ ಅವರು ಸ್ವೀಕರಿಸಿದರು.



ವಾಗುತ್ತವೆ. ಆ ರಚನೆಗಳಲ್ಲಿ ಕಾಣುವ ಪದ ಜೋಡಣೆ, ರಾಗ - ತಾಳಗಳ ಹೊಂದಾಣಿಕೆಯ ಸ್ವರೂಪ, ಅವುಗಳಲ್ಲಿ ಕಂಡುಬರುವ ಲಯ - ಇವನ್ನು ಸ್ಪಷ್ಟಪಡಿಸುತ್ತವೆ. ಹಾಗೆಯೇ ಹೇಳಿಕೊಂಡರೂ, ಸೊಗಸಾದ ಸಾಹಿತ್ಯಕ ಭಾಗಗಳಾಗುತ್ತವೆ. ಆದರೆ ಅವನ್ನು ನೃತ್ಯಕ್ಕೆ ಅಳವಡಿಸಿದಾಗ ಅವು ನೀಡುವ ಸೊಗಸೇ ಬೇರೆಯಾಗಿರುತ್ತದೆ. ಇದಕ್ಕೆ ಉದಾಹರಣೆಯಾಗಿ-

1. ಕೃಷ್ಣಬಾರೊ, ಕೃಷ್ಣಬಾರೊ, ಕೃಷ್ಣಯ್ಯನೇ ನೀ ಬಾರಯ್ಯ.

2. ಗುಮ್ಮನ ಕರೆಯದಿರಿ, ಅಮ್ಮಾ ನೀವು ಗುಮ್ಮನ ಕರೆಯದಿರಿ.

3. ಆಡ ಪೋಗೋಣ ಬಾರೊ ರಂಗ, ಕೂಡಿ ಯಮುನಾ ತೀರದಲ್ಲಿ -

ಎಂಬವುಗಳನ್ನು ಕೊಡಬಹುದು.

ಇವು ನೃತ್ಯಕ್ಕೆ ಎಷ್ಟು ಚೆನ್ನಾಗಿ ಹೊಂದಿಕೊಳ್ಳುತ್ತವೆಯೊ, ಸಾಹಿತ್ಯಕವಾಗಿಯೂ ಉತ್ತಮ ಭಾವನೆಗಳನ್ನು ಹೊರಗೆಡಹುತ್ತವೆ. ಇವು ಪುರಂದರದಾಸರಿಗೆ ಭರತನಾಟ್ಯದ ಶಾಸ್ತ್ರೀಯ ಭಾಗದ ಪರಿಚಯವಿತ್ತು ಎಂಬುದನ್ನು ಸ್ಪಷ್ಟಪಡಿಸುತ್ತವೆ. ಅಂತೆಯೇ ಪ್ರದರ್ಶನಕಲೆಯ ದೃಷ್ಟಿಯನ್ನೂ ಇದರಲ್ಲಿ ಸೇರಿಸಿದ್ದಾರೆ.

ಹರಿದಾಸರಾದವರು ಉಂಛವೃತ್ತಿಯನ್ನು ಅನುಸರಿಸಲೇಬೇಕಾಗಿತ್ತು. ಪುರಂದರದಾಸರು ವಿಜಯನಗರದಂತಹ ವೈಭವದ ನಗರದಲ್ಲಿದ್ದರೂ ಉಂಛವೃತ್ತಿಯನ್ನು ಅನುಸರಿಸುತ್ತಿದ್ದರು. ಹರಿದಾಸರ ವಸ್ತ್ರಧಾರಣೆಯೊಂದಿಗೆ ಹೊರಟರೆ ಜನಸಾಮಾನ್ಯರಿಗೆ ಅದೊಂದು ಹಬ್ಬ, ಸಂಗೀತದ, ನೃತ್ಯದ ಸವಿಯ ಹಬ್ಬ, ಆಗತಾನೆ ಭಜನ ಪದ್ಧತಿಯೂ ರೂಢಿಗೆ ಬಂದಿತ್ತು. ಭವಿಷ್ಯ ಜನಾಂಗವಾಗಿದ್ದ ಬಾಲರು, ಯುವಕರು, ಮುಗ್ಧರಿಗೆ ಶಿಕ್ಷಣ ನೀಡುವ ದೃಷ್ಟಿಯಿಂದ ಬೋಧಪ್ರಧಾನವಾದ ರಚನೆಗಳನ್ನು ಅವರು ಹೇಳುತ್ತಿದ್ದರು. ಹಾಗೆ ಹೇಳುವಾಗ ನೃತ್ಯ ಮಾಡಿಕೊಂಡು, ಮುಖದಲ್ಲಿ ಹಾವಭಾವಗಳನ್ನುತೋರುತ್ತಾ, ಕ್ರಮಬದ್ಧವಾದ ಆಂಗಿಕದಿಂದ, ಸುಮಧುರ ಕಂಠ ಹಾಗೂ ಆಕರ್ಷಕ ರಾಗ, ತಾಳಗಳೊಂದಿಗೆ ಹೇಳುತ್ತಿದ್ದರೆ, ಆಲಿಸುವ ಜನರು ಮಂತ್ರಮುಗ್ಧರಾಗುತ್ತಿದ್ದರು. ದಾಸರು ಆ ರೀತಿಯಲ್ಲಿ ವಾಚಿಸದಿದ್ದರೆ ಅವರ ರಚನೆಗಳು ಅಷ್ಟೊಂದು ಆಕರ್ಷಣೆ ಹೇಗೆ ಮತ್ತು ಎಲ್ಲಿಂದ ಬರುತ್ತಿತ್ತು? ಅವರು ಆಗಲೇ ಜನಪ್ರಿಯರಾಗಿದ್ದರು ಎಂಬುದಕ್ಕೆ ಇದೇ ಸಾಕ್ಷಿ.

ಭಗವಂತನನ್ನು ಎಲ್ಲ ರೂಪಗಳಲ್ಲಿಯೂ ಅವರು ಹಾಡಿ, ನೃತ್ಯ ಮಾಡಿ ಹೊಗಳಿದ್ದರೂ, ಶ್ರೀಕೃಷ್ಣನೆಂದರೆ ತುಂಬಾ ಅಚ್ಚುಮೆಚ್ಚು. ಅದಕ್ಕಾಗಿಯೇ ಅವರ ಅನೇಕ ರಚನೆಗಳು ಕೃಷ್ಣನ ಬಾಲ ಲೀಲೆಗಳನ್ನು ಕುರಿತಾದವುಗಳಾಗಿದ್ದುವು.

ಹರಿದಾಸರೆಲ್ಲರೂ ಸ್ಫುರದ್ರೂಪಿಗಳು. ಅಂತೆಯೇ ಪುರಂದರದಾಸರೂ ಕೂಡ. ಭಗವಂತನ ಸಾಕ್ಷಾತ್ಕಾರವನ್ನು ಪಡೆದಿದ್ದ ಅವರಲ್ಲಿ ದೈವೀಕ ಸೌಂದರ್ಯ ನೆಲೆಸಿತ್ತು. ಇಂತಹ ಸ್ಫುರದ್ರೂಪಿಯಾದ ದಾಸರು ತಮ್ಮ ಶುದ್ಧ ಅಂಗ ಚಲನೆಗಳಿಂದ ಕೃಷ್ಣನ, ಯಶೋದೆಯ, ಗೋಪಬಾಲೆಯರ, ಗೊಲ್ಲರ, ರುಕ್ಮಿಣಿಯ ಭಾವನೆಗಳನ್ನು ತಮ್ಮ ಮುಖದಲ್ಲಿ ತೋರಿಸುತ್ತಾ ಭಾವಾಭಿನಯ ಮಾಡಿದಾಗ, ಅವರ ಹಾಡಿಗೆ ಎಷ್ಟೊಂದು ಶೋಭೆ ಬರಬೇಡ! ಮಕ್ಕಳಿಗೆ, ಅಂದಿನ ಮಕ್ಕಳೇ ಏನು, ಇಂದಿನ ಮಕ್ಕಳೂ ಕೂಡ, ಈ ರಚನೆಗಳು ತುಂಬಾ ಇಷ್ಟವಾಗಿ ಪ್ರತಿಯೊಬ್ಬರೂ ಈ ಪದಗಳನ್ನು, ಹಾಡುಗಳನ್ನು ತಮಗೆ ತಾವೇ ಹೇಳಿಕೊಂಡು, ಬಾಲಕೃಷ್ಣನನ್ನೆ ಕಂಡಷ್ಟು ಸಂತೋಷಪಡುತ್ತಿದ್ದರು.

ಒಂದು ಸುಮಧುರ ಕಂಠದಿಂದ ನೃತ್ಯನಮಾಡುತ್ತಾ ಹೇಳಿದ ಇಂತಹ ಕಲ್ಪನಾವಿಲಾಸದ ರಚನೆಗಳು ಕೇಳುಗರ ಕನಸುಗಳನ್ನು ಹುಚ್ಚೆಬ್ಬಿಸುತ್ತಿದ್ದುದು ಆಗ ಸಾಮಾನ್ಯವಾಗಿತ್ತು.

ಹೀಗಾಗಿ ನೃತ್ಯವಿಲ್ಲದೆ ಅವರು ಕೇವಲ ಹಾಡುಗಳನ್ನು ಮಾತ್ರ ಹೇಳುತ್ತಿದ್ದರೆಂಬುದನ್ನು ಊಹಿಸಲಸದಳ. ಈ ರಚನೆಗಳು ನರ್ತನದೊಂದಿಗೆ ಹಾಡುವಂತಹುವೇ ಆಗಿದ್ದುವು.

ಇಂತಹ ರಚನೆಗಳು ಸಂಚಾರಿ ಭಾವಕ್ಕೆ ಎಡೆಕೊಡುವಂತಹವಾಗಿದ್ದುದರಿಂದ ಇಂದಿನ ನರ್ತಕರು ಸಂಚಾರಿಯನ್ನು ತೋರಿಸುವುದಕ್ಕಾಗಿಯೇ ದಾಸರ ಇಂತಹ ರಚನೆಗಳನ್ನು ಆರಿಸಿಕೊಳ್ಳುತ್ತಾರೆ.

'ಕೃಷ್ಣ ಬಾರೊ....', 'ಗುಮ್ಮನ ಕರೆಯದಿರಿ....', 'ಆಡ ಪೋಗೋಣ ಬಾರೋ ರಂಗ....', 'ಪಿಳ್ಳಂ ಗೋವಿಯ ಚೆಲುವ ಕೃಷ್ಣನ ಎಲ್ಲಿ ನೋಡಿದಿರೆ....?', 'ಕೃಷ್ಣ ನೀ ಬೇಗನೇ ಬಾರೊ....'

ಇತ್ಯಾದಿ ಹಾಡುಗಳು ಮಕ್ಕಳಿಗಾಗಿ, ಮಕ್ಕಳ ನೃತ್ಯಕ್ಕಾಗಿ, ಮಕ್ಕಳ ನಾಟಕಕ್ಕಾಗಿ ಬರೆದವುಗಳೆಂದು ಸ್ಪಷ್ಟವಾಗಿ ಕಂಡುಬರುತ್ತದೆ. ಕಾರಣ, ಹಾಡಿನ ಭಾಷೆ - ಮಕ್ಕಳ ಆಡು ಭಾಷೆಯಲ್ಲಿ, ಸಂಭಾಷಣಾ ರೀತಿಯಲ್ಲಿ, ಮಕ್ಕಳಿಗೆ ತುಂಬಾ ಸುಲಭವಾಗಿರುವಂತೆ ರಚಿಸಲಾಗಿದೆ. ನೇರವಾಗಿರುವುದರಿಂದ ಮಕ್ಕಳ ಹೃದಯವನ್ನು ಮುಟ್ಟುತ್ತದೆ. ಹಿರಿಯರ ಹೃದಯಗಳಿಗೂ ಈ ಹಾಡುಗಳು ಮುದ ನೀಡುವಂತಿವೆ. ಇವೆಲ್ಲಕ್ಕಿಂತ ಹೆಚ್ಚಾಗಿ ಲಯಬದ್ಧವಾಗಿದ್ದು, ಮಕ್ಕಳ ಕುಣಿತಕ್ಕೆ ಅನುಕೂಲವಾಗಿವೆ. ಹಾಡುಗಳನ್ನು ಆರಿಸುತ್ತಿದ್ದರೆ ತಾವೇ ಕುಣಿಯೋಣ ಎನ್ನಿಸುತ್ತದೆ ಮಕ್ಕಳಿಗೆ. ಅಂತಹುದರಲ್ಲಿ ಇವು ನೃತ್ಯಕ್ಕಾಗಿ ಬರೆದಿಲ್ಲ ಎಂದು ಹೇಗೆ ಹೇಳಲಿಕ್ಕಾದೀತು?

ಈ ಹಾಡುಗಳ ರಚನೆಯನ್ನು ನೋಡಿದರೆ, ಇವು ಬಹುಶಃ ಆಶುಕವಿತೆಗಳಾಗಿದ್ದು, ಮಕ್ಕಳೊಂದಿಗೆ ಆಡುತ್ತ ಆಡುತ್ತಲೇ ದಾಸರು ಇವುಗಳನ್ನು ರಚಿಸಿರಬಹುದು ಎಂದು ಕಾಣುತ್ತದೆ. ಅವರ ಅನೇಕ ರಚನೆಗಳು ಮಕ್ಕಳಸಾಹಿತ್ಯಕ್ಕೆ ಸೇರುವುವು.

ಪುರಂದರರಿಗೆ ಮಕ್ಕಳೆಂದರೆ ತುಂಬಾ ಇಷ್ಟ ಎಂದು ಕಾಣುತ್ತದೆ. ಅಲ್ಲದೆ ಅವರಿಗೆ ಶ್ರೀಕೃಷ್ಣ ಇತರ ಎಲ್ಲ ದೈವಗಳಿಗಿಂತಲೂ ತುಂಬಾ ಇಷ್ಟವಾದ ದೈವ ಎಂದು ಈಗಾಗಲೆ ಹೇಳಿದೆ. ಆದರಿಂದಲೇ ಕೃಷ್ಣನ ಮೇಲಿನ ಹಾಡುಗಳು, ಮೇಲೆ ತಿಳಿಸಿದವುಗಳು, ನೃತ್ಯಕ್ಕೆ ಚನ್ನಾಗಿ ಹೊಂದಿಕೊಂಡಿವೆ. ಇವೆಲ್ಲಕ್ಕಿಂತ ಹೆಚ್ಚಾಗಿ ಮಕ್ಕಳನ್ನು ಕರೆದುಕೊಂಡು ದೇವಸ್ಥಾನಗಳ ಮಹಾದ್ವಾರಗಳ ಪಕ್ಕದಲ್ಲಿನ ಜಗುಲಿಯ ಮೇಲೋ, ದೇವರ ಎದುರಿಗೊ ಈ ಹಾಡುಗಳನ್ನು ಪ್ರಯೋಗಿಸಿ, ನೃತ್ಯ ರೂಪಕಗಳನ್ನು ಮಾಡಿಸಿರಬೇಕು. ಆ ಕಾರಣದಿಂದಲೇ ಇವು ನೃತ್ಯರೂಪಕಗಳಿಗೆ ತುಂಬಾ ಹತ್ತಿರವಾಗಿವೆ. ★

ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿ.

# ಶ್ರೀ ವೆಂಕಟೇಶ್ವರಸ್ವಾಮಿಯ ಭಕ್ತರಲ್ಲಿ, ಸಾಹಿತ್ಯ ವಿದರಲ್ಲಿ

# ವಿನಂತಿ

ತಿರುಮಲ ತಿರುಪತಿ ದೇವಸ್ಥಾನಗಳ ನೇತೃತ್ವದಲ್ಲಿ ''ಭಾರತೀಯ ಸಾಹಿತ್ಯದಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ'' ಎಂಬ ವಿಷಯದಲ್ಲಿ ಪರಿಶೋಧನೆ ನಡೆಯುತ್ತಿದೆ. ಈ ಯೋಜನೆಯಲ್ಲಿ ಬಳಸಿಕೊಳ್ಳಲು, ವಿಷಯ ಸಮಗ್ರತೆಗಾಗಿ ತಮಗೆ ತಿಳಿದ ವಿಷಯವನ್ನು ತಿಳಿಸಲು ಕೋರಲಾಗಿದೆ.

1. ತಿರುಪತಿ ಶ್ರೀ ವೆಂಕಟೇಶ್ವರಸ್ವಾಮಿಯ ಪ್ರಶಸ್ತಿಯಿರುವ ಗ್ರಂಥಗಳು.
2. ವೆಂಕಟಾಚಲ ಕ್ಷೇತ್ರ ಚರಿತ್ರೆ, ಮಾಹಾತ್ಮ್ಯೆ ಗ್ರಂಥಗಳು.
3. ವೆಂಕಟೇಶ್ವರಸ್ವಾಮಿಯ ಬಗ್ಗೆ ಉಂಟಾಗಿರುವ ಗ್ರಂಥಗಳು.
4. ಸ್ವಾಮಿಯ ಭಕ್ತರ ಚರಿತ್ರೆಗಳು.
5. ಸ್ವಾಮಿ ಮಹಿಮೆಯನ್ನು ಲೀಲೆಯನ್ನು ವರ್ಣಿಸುವ ಗ್ರಂಥಗಳು.
6. ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯ ಬಗ್ಗೆ ಬಂದಿರುವ ಸಂಶೋಧನ ಗ್ರಂಥಗಳು (ಮುದ್ರಿತ, ಅಮುದ್ರಿತ).
7. ತಾಳ್ಳಪಾಕದವರ ಸಾಹಿತ್ಯದ ಬಗ್ಗೆ ಬಂದಿರುವ ಸಂಶೋಧನ ಗ್ರಂಥಗಳು (ಮುದ್ರಿತ, ಅಮುದ್ರಿತ).
8. ದಿನ ವಾರ ಮಾಸ ಪತ್ರಿಕೆಗಳಲ್ಲಿ ಬಂದಿರುವ ಪ್ರಬಂಧಗಳು, ಪ್ರತ್ಯೇಕ ಸಂಚಿಕೆಗಳು.
9. ಶ್ರೀ ವೆಂಕಟೇಶ್ವರಸ್ವಾಮಿ ದೀಪಾರಾಧನೆ, ಶನಿವಾರವ್ರತ, ಗೋವಿಂದಮಾಲೆ, ಜೋಗಿ ಎತ್ತುವಿಕೆ, ಮೊದಲಾದ ಪ್ರಾಂತೀಯ ಆರಾಧನಾ ಪದ್ಧತಿ, ಸಂಪ್ರದಾಯಗಳ ಬಗ್ಗೆ ಸಮಾಚಾರಗಳು.

ಮೇಲಿನ ವರ್ಗೀಕರಣಕ್ಕೆ ಸಂಬಂಧಿಸಿದ ಪದ್ಯ, ಗದ್ಯ, ದ್ವಿಪದ, ಗೇಯ ಕಾವ್ಯಗಳು, ನಾಟಕಗಳು, ಚೂರ್ಣಿಕೆಗಳು, ಶತಕಗಳು, ಸ್ತೋತ್ರಗಳು, ಉದಾಹರಣೆಗಳು, ಅಷ್ಟಕಗಳು, ತಾರಾವಳಿಗಳು, ಯಕ್ಷಗಾನಗಳು, ವಚನಗಳು, ಗದ್ಯಗಳು, ಹಾಡುಗಳು, ಲಾವಣಿಗಳು, ತ್ರಿಪದಿಗಳು, ಜಾನಪದ ಹಾಡು, ಮೊದಲಾದ ವಿವಿಧ ಸಾಹಿತ್ಯ ಪ್ರಾಕಾರಗಳಿಗೆ ಸಂಬಂಧಿಸಿದ ರಚನೆಗಳ ಬಗೆಗಿನ ಸಮಾಚಾರಗಳನ್ನು 1) ಗ್ರಂಥದ ಹೆಸರು, 2) ರಚನೆಗಾರರು, 3) ಮುದ್ರಣ ಸಂವತ್ಸರ, 4) ಪ್ರಕಟಣಕಾರರ ವಿಳಾಸ (ಪ್ರಾಪ್ತಿಸ್ಥಾನ) ಅಮುದ್ರಿತ ವಾಗಿದ್ದಲ್ಲಿ ಪ್ರಾಪ್ತಿಸ್ಥಾನ - ರಚನೆಗಾರರ ವಿಳಾಸ - ಮೊದಲಾದವನ್ನು ವಿವರಗಳೊಡನೆ ಬರೆದು ತಿಳಿಸಬೇಕಾಗಿ ಪ್ರಾರ್ಥನೆ.

ಬರೆಯ ಬೇಕಾದ ವಿಳಾಸ -

**ರಿಸರ್ಚ್ ಆಫೀಸರ್,**
ಎಸ್.ವಿ.ಐ. ಹೈಯರ್ ವೇದಿಕ್ ಸ್ಟಡೀಸ್,
ಟಿ.ಟಿ.ಡಿ. ಸೆಂಟ್ರಲ್ ಲೈಬ್ರರಿ ಬಿಲ್ಡಿಂಗ್ಸ್,
ತಿರುಪತಿ 517 502.

# ದಕ್ಷಿಣದ ಕೇದಾರ ಕನ್ನಡನಾಡಿನ ಬಳ್ಳಿಗಾವೆ

- ಆರ್. ಜಿ. ಶ್ಯಾನಭಾಗ.

ನಮ್ಮ ದೇಶಕ್ಕೆ ನಿಖರವಾದ ಭೂಗೋಲ ಇದೆ. ಆದರೆ ನಿಖರವಾದ ಇತಿಹಾಸ ಇಲ್ಲವೆಂದು ಪ್ರಾಜ್ಞರು ತಮಾಷೆಗಾಗಿ ಆಡಿದ ಮಾತು ಬಾಯಿಂದ ಬಾಯಿಗೆ ಹರಿದು ಬಂದದ್ದು. ಸಂಶೋಧಕರಾದರೂ ಅಧ್ಯಯನ ಹಾಗೂ ಸಂಶೋಧನೆ ನಡೆದ ಸ್ಥಳದಲ್ಲಿ ಮತ್ತೆ ಮತ್ತೆ ನಡೆಸುತ್ತಿರುವರು. ಉಳಿದ ಸುಪ್ರಸಿದ್ಧ ಐತಿಹಾಸಿಕ ತಾಣಗಳು ದಿವ್ಯನಿರ್ಲಕ್ಷ್ಯಕ್ಕೆ ಒಳಗಾಗುತ್ತವೆ. ಸಮಗ್ರ ಸಂಶೋಧನೆ - ಅಧ್ಯಯನಕ್ಕೆ ಬಳ್ಳಿಗಾವೆ ಒಳಗಾಗಿಲ್ಲ. ಹೀಗಾಗಿ ಅದರ ಇತಿಹಾಸ ಇನ್ನು ಸ್ಪಷ್ಟವಾಗಿಲ್ಲ.

ಶಿವಮೊಗ್ಗ ಜಿಲ್ಲೆಯ ಶಿರಾಳಕೊಪ್ಪದಿಂದ ಒಂದು ಕಿ.ಮೀ. ದೂರದಲ್ಲಿರುವ ಬಳ್ಳಿಗಾವೆ ಕಾಲನ ಕಾಲ್ತುಳಿತಕ್ಕೆ ಒಳಗಾಗಿ ನಾಮಾವಶೇಷವಾದ ಐತಿಹಾಸಿಕ ತಾಣ. ಇದರ ಸುತ್ತಕಣ್ಣು ಹಾಯಿಸಿದರೆ ಗತವೈಭವ ಸಾರುವ ನೂರಾರು ಶಾಸನ ವೀರಗಲ್ಲು, ಪಾಳುಬಿದ್ದ ದೇವಾಲಯಗಳು, ಮೂಕಸಾಕ್ಷಿಯಾಗಿ ಬಿದ್ದಿವೆ. ಸುಮಾರು 900 ವರ್ಷಗಳ ಹಿಂದೆ ಬಳ್ಳಿಗಾವೆ ಸಿರಿನಾಡಾಗಿತ್ತು. ಬನವಾಸಿ ಮತ್ತು ಕಲ್ಯಾಣ ಈ ಸಾಮ್ರಾಜ್ಯದ ರಾಜಧಾನಿಯಾಗಿ ಮೆರೆದು ಮರಿಕಲ್ಯಾಣ ಎಂಬ ಇನ್ನೊಂದು ಹೆಸರಿಂದ ಬಳ್ಳಿಗಾವೆ ಮೆರೆದಾಡಿದೆ. ಬಲಿಪುರಂ, ಬಳಿಗಾಂವೆ, ಬಳ್ಳಿಗ್ರಾಮ ಇವೇ ಹೆಸರುಗಳಿಂದ ಬಳ್ಳಿಗಾವೆ ಪಡೆದಿತ್ತೆಂದು ಶಾಸನ ತಿಳಿಸುತ್ತದೆ. ಇದೊಂದು ಅನಾದಿ ಪಟ್ಟಣ. ಅದರಿಂದ ಪಟ್ಟಣಗಳ ತಾಯಿ ಎಂಬ ಕೀರುತಿ ಇದಕ್ಕೆ ದಕ್ಕಿರುವುದು.

ಶ್ರೀಕ್ಷೇತ್ರಗಳ ಮಹಿಮೆ ಗರಿಮೆಗಳನ್ನು ಮೈಗೂಡಿಸಿಕೊಂಡ ಬಳ್ಳಿಗಾವೆ ವಾರಣಾಸಿಗಿಂತ ಎರಡರಷ್ಟು ಕೇದಾರಕ್ಕಿಂತ ನೂರರಷ್ಟು, ಶ್ರೀಶೈಲಕ್ಕಿಂತಲೂ ಸಾವಿರಪಾಲಿನಷ್ಟು ಪವಿತ್ರವಾಗಿ ಗೌರವಾದರಗಳಿಂದ ಕಾಣಲಾಗುತ್ತಿದೆ. ಜನರ ಪಾಪನಾಶನ ಮಾಡುವ ಪುಣ್ಯಕ್ಷೇತ್ರ ದಕ್ಷಿಣ ಕೇದಾರದ ಸ್ಥಾನಮಾನವನ್ನು ಪಡೆದ ಬಳ್ಳಿಗಾವೆಯಲ್ಲಿ ದಾನಶೂರ ಬಲಿಚಕ್ರವರ್ತಿ ನೆಲೆಸಿದ್ದರಿಂದ ಬಲಿಪುರ ಎಂಬ ಹೆಸರೂ ಪಡೆದಿತ್ತು. ಇದು ವಿಸ್ತೃತ ನಗರವಾಗಿತ್ತು. ಮೂರುಪುರಗಳಿಂದಲೂ ಏಳು ಬ್ರಹ್ಮಪುರಿಗಳಿಂದಲೂ ಐದು ವಿದ್ಯಾಪೀಠಗಳಿಂದಲೂ, ಅನೇಕ ಅಗ್ರಹಾರ, ನೂರಾರು ದೇವಾಲಯಗಳಿಂದಲೂ, ಕೂಡಿದ ಬಳ್ಳಿಗಾವೆ ಒಂದು ನಗರವಾಗಿತ್ತು. ಇಲ್ಲಿನ ಜನರು ಸತ್ಯಸಂಧರೂ, ಧರ್ಮಪರಿಪಾಲಕರೂ, ಕ್ಷಮಾಶೀಲರೂ - ಸಲ್ಲಕ್ಷಣಗಳೆಂಬ ಹೊಗಳಿಕೆಗೂ ಪಾತ್ರರಾಗಿದ್ದರು. ತಾವು ಹೊಂದಿರುವ ಐಶ್ವರ್ಯ ನಶ್ವರ ಎಂಬ ಕಾರಣಕ್ಕಾಗಿ ಅದನ್ನು ದಾನಮಾಡಿ ಶಾಶ್ವತ ಪುಣ್ಯಗಳಿಸುತ್ತಿದ್ದರಂತೆ.

ಅನಾದಿ ಪಟ್ಟಣ ಬಳ್ಳಿಗಾವೆ ಹನ್ನೆರಡನೇ ಶತಮಾನದ ಮೊದಲೇ ನಿರ್ಮಾಣಗೊಂಡಿತ್ತು. ಬಹು ಧರ್ಮಿಯರು ನೆಲೆಸಿರುವ ಇಲ್ಲಿ ದೇವಾಲಯಗಳು, ಜಿನಪ್ರತಿಮೆಗಳು, ಜೈನಬಸದಿಗಳು, ಹಾಳಾಗಿಬಿದ್ದಿವೆ. ಜನರು ದೇವಪ್ರಿಯರೇ ಆದುದ್ದರಿಂದ ದೇವಾಲಯಗಳು ಅಗಣಿತವಾಗಿವೆ. ಈ ಸಂಬಂಧ ಸ್ವಾರಸ್ಯಕರ ಕಥೆ ಹೊಸೆದುಕೊಂಡಿದೆ.

ಒಮ್ಮೆ ನಾಡ ಶೆಟ್ಟಿಯೊಬ್ಬ ಗೋಣಿಚೀಲ ತುಂಬಿ ಕಡಲೆಕಾಯಿ ತಂದಿದ್ದ. ನಗರದಲ್ಲಿರುವ ಒಂದೊಂದು ದೇವರಿಗೆ ಒಂದೊಂದು ಕಡಲೆಕಾಯಿ ನೈವೇದ್ಯವಾಗಿ ನೀಡುತ್ತ ಆತ ಸಾಗಿದಾಗ - ಬಸವಣ್ಣನಿದ್ದೆಡೆ ಬಂದಾಗ ಕಡಲೆಕಾಯಿಗಳೆಲ್ಲವೂ ಬರಿದಾದವು. ಹೀಗಾಗಿ ತನಗೆ ನೈವೇದ್ಯ ಇಲ್ಲ ಎಂದು ಮುನಿದ ಬಸವಣ್ಣ



ಜಿಡ್ಡಿ ಕೆರೆಯೆಂಬ ಕೆರೆಯ ಏರಿಯ ಮೇಲೆ ಏರಿ ಕುಳಿತನಂತೆ. ಬಂದ ಪ್ರವಾಸಿಗರೆಲ್ಲ ಈತ ಕಡಲೆ ಬಸವ ಎಂದು ಪರಿಚಯಿಸಲಾಗುತ್ತಿದೆ. ಬಳ್ಳಿಗಾವೆಯ ಪೂರ್ವಿಕರು ದೈವಭಕ್ತರೂ, ಭಾವುಕರೂ, ಎಂದು ಗುರುತಿಸಲು ದೇಗುಲಗಳೇ ಜೀವಂತ ಸಾಕ್ಷಿ.

ಚಾಲುಕ್ಯ ದೊರೆ ಕಟ್ಟಿಸಿದ ಕಗ್ಗಲ್ಲಿನ ಕೇದಾರೇಶ್ವರ ದೇವಾಲಯದಲ್ಲಿ ಲಿಂಗವಿದೆ. ತಾವರೆ ಕೆರೆಯ ತಟದ ಮೇಲಿರುವ ಈ ದೇವಾಲಯದಿಂದ ಬಳ್ಳಿಗಾವೆಗೆ ದಕ್ಷಿಣ ಕೇದಾರೇಶ್ವರ ಹೆಸರು ಅನ್ವರ್ಥಕ. ಉತ್ತರದ ಕೇದಾರೇಶ್ವರ ದಕ್ಷಿಣದವರ ಮೇಲೆ ಕೃಪೆ ಬೀರಲು ಇಲ್ಲಿ ಬಂದು ನೆಲೆಸಿದನೆಂಬ ಪ್ರತೀತಿ ಇದೆ. ದೇಗುಲದ ಗೋಪುರದ ಮೇಲೆ ಎರಡು ಹುಲಿಯನ್ನು ಸೀಳುತ್ತಿರುವ ಹೊಯ್ಸಳರ ರಾಜಮನೆತನದ ಶಿಲ್ಪಚಿತ್ರಗಳು ಇವೆ. ಕೇದಾರೇಶ್ವರ ಲಿಂಗದ ಬಲಕ್ಕೆ ಇನ್ನೊಂದು ಲಿಂಗ, ಅದರ ಜಲಧಾರಿ ಬಲಕ್ಕಿದೆ. ಲಿಂಗ ಬ್ರಹ್ಮನನ್ನು ಪ್ರತಿನಿಧಿಸುವುದು. ಗರ್ಭಗುಡಿಯ ಬಾಗಿಲ ಮೇಲ್ಭಾಗದಲ್ಲಿ ಧರ್ಮಸಹಿಷ್ಣುತೆಯ ಪ್ರತೀಕವಾಗಿ ಬ್ರಹ್ಮ, ವಿಷ್ಣು, ಮಹೇಶ್ವರ, ಪ್ರತಿಮೆಗಳು ಇವೆ. ಗೋಪುರ ಮತ್ತು ಮುಖಮಂಟಪದ ಬಾಗಿಲಲ್ಲಿ ಬಾಯ್ತೆರೆದ ಸಿಂಹ ಲಲಾಟಗಳಿವೆ. ದೇವಾಲಯದ ಪ್ರಾಕಾರದಲ್ಲಿ ಜನಸಾಮಾನ್ಯರು ಪ್ರಭುದೇವರ ಮಂಟಪ ಅನ್ನುವ ನಖೇಶ್ವರ ದೇವಾಲಯ ಇದ್ದು ಪಟ್ಟದಕಲ್ಲಿನ ವೀರಭಣಂಜು ಎಂಬ ವ್ಯಾಪಾರಿ ಸಂಘ ಇದನ್ನು ಕಟ್ಟಿಸಿದೆ ಎನ್ನಲಾಗಿದೆ. ವಚನಕಾರ ಪ್ರಭುದೇವರು ಈ ದೇವಾಲಯದ ಪಾಠಶಾಲೆಯಲ್ಲಿ ವ್ಯಾಸಂಗ ಮಾಡಿದ್ದರಿಂದ ದೇವಾಲಯಕ್ಕೆ ಪ್ರಭುದೇವರ ಮಂಟಪ ಎಂಬ ಹೆಸರು ಬಂದಿದೆ. ವೀರಗಲ್ಲು, ಮಾಸ್ತಿಕಲ್ಲು, ಅನೇಕ ದೇವತಾ ವಿಗ್ರಹ ದೇವಾಲಯದ ಪ್ರಾಂಗಣದಲ್ಲಿ ನಿಲ್ಲಿಸಲಾಗಿದೆ. ಸಾಲಾಗಿ ಒಂದೇ ಕಲ್ಲಿನಲ್ಲಿ ಬ್ರಾಹ್ಮಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡಿಯರ ವಿಗ್ರಹಗಳನ್ನು ಕ್ರಮವಾಗಿ ಕೆತ್ತಲಾಗಿದೆ. ತಾರಾಭಾಗವತಿ ಎಂಬ ಬೌದ್ಧದೇವತೆ ವಿಗ್ರಹ, ಸೂರ್ಯದೇವರ ವಿಗ್ರಹ ಹಾಗೂ ದ್ವಾರಪಾಲಕರ ವಿಗ್ರಹಗಳು ಇಲ್ಲಿ ರಾರಾಜಿಸುತ್ತಿರುವುದರ ಜೊತೆ ಎರಡನೇ ವೀರಬಲ್ಲಾಳನ ಹೆಂಡತಿ ಕೇತಲದೇವಿ ಕಟ್ಟಿಸಿದ ಮಹಾದ್ವಾರ ಈ ದೇವಾಲಯಕ್ಕೆ ಸೊಬಗನ್ನು ನೀಡಿದೆ.

ದೇವಾಲಯದಲ್ಲಿ ರಾಜವೇಶ್ಯೆ ಜಂಗುಲಿ ಹೆಸರಿನ ಜಂಗುಲಿಪೀಠ ಎಂಬ ಜಗುಲಿ ಇದೆ. ದೇವಾಲಯದಲ್ಲಿ ನರ್ತಕಿಯಾದ ಆಕೆ ಗುರುಹಿರಿಯರೂ, ದೇವರು, ರಾಜನಲ್ಲಿಯೂ ಅಪಾರ ನಿಷ್ಠೆಯುಳ್ಳವಳಾಗಿದ್ದಳು. ಆಚಾರ್ಯನೊಬ್ಬ ಆಕೆಯೊಡನೆ ಪ್ರಣಯಕ್ಕಾಗಿ ಇಳಿದನು. ಆತ ರಾಜದ್ರೋಹದ ಆಪಾದನೆಗೆ ಒಳಗಾದನು. ಆನೆಯ ಕಾಲ್ತುಳಿತದ ಶಿಕ್ಷೆ, ಆತ ಎದುರಿಸುವ ಪ್ರಸಂಗ ಬಂದಾಗ ಆನೆ ಆಚಾರ್ಯನನ್ನು ತುಳಿಯದೆ ನಮಿಸಿ ಹಿಂದಿರುಗಿತು. ಘಟನೆ ರಾಜನ ಒಳಗಣ್ಣು ತೆರೆಸಿತು. ಈ ಜಗುಲಿಯ ಮೇಲೆ ಸಭೆ ನಡೆಸಿ ಆಚಾರ್ಯ ನಿರಪರಾಧಿ ಎಂದು ದೊರೆ ಸಾರಿದ್ದರಿಂದ ಪೀಠಕ್ಕೆ ವೇಶ್ಯೆಯಾದ ಜಂಗುಲಿ ಹೆಸರು ಬಂದಿತ್ತು.

ಕೇದಾರೇಶ್ವರ ದೇವಾಲಯದ ಹತ್ತಿರ ಉಡುತಡಿಯಮ್ಮನ ಗುಡಿ ಇದೆ. ಇದರಲ್ಲಿರುವ ಶಾಕ್ತ ಸಂಪ್ರದಾಯ ಶೈಲಿಯ ವಿಗ್ರಹ ಬೆತ್ತಲೆಯಾಗಿ ಕುಳಿತ ಭಂಗಿ ವಿಚಿತ್ರವಾದುದು. ಹೆಣ್ಣಿನದಾದ ವಿಗ್ರಹವನ್ನು ಕಮಲಗಂಗಪ್ಪ ಎಂದೆನ್ನುವರು.

ತ್ರಿಪುರಾಂತೇಶ್ವರ ಬಳ್ಳಿಗಾವೆಯ ಇನ್ನೊಂದು ಹೆಸರಾಂತ ದೇವಾಲಯ. ವೀಕ್ಷಣೆಗೆ ಆಕರ್ಷಕವಾಗಿದ್ದು ಎರಡು ಗರ್ಭಗುಡಿಗಳನ್ನೊಳಗೊಂಡು ಒಂದರಲ್ಲಿ ವಿಷ್ಣು, ಇನ್ನೊಂದರಲ್ಲಿ ಲಿಂಗ ಪ್ರತಿಷ್ಠಾಪನೆಗೊಂಡಿದ್ದಿದೆ. ವಾಲಿವಧೆ, ಶ್ರೀರಾಮ ಬಾಣ ಮಹಿಮೆ ಸಾರುವ ಪ್ರಸಂಗ, ಪ್ರಾಣಿಸಂಕುಲ, ಪಂಚತಂತ್ರ ಕಥೆಗಳು, ಕೋಲಾಟವಾಡುವ ಹುಡುಗಿಯರು ದೇವಾಲಯದ ಮೇಲ್ಮೈಯ ಮೇಲೆ ಶಿಲ್ಪಕೃತಿಗಳಾಗಿ ಮೂಡಿವೆ. ವಿಷ್ಣುಮೂರ್ತಿ, ದ್ವಾರಪಾಲಕರು ಹಾಗೂ ವೃತ್ತದಲ್ಲಿ ನರ್ತಿಸುವ ನರ್ತಕಿಯರ ಸೊಗಸನ್ನು ಹೆಚ್ಚಿಸುವ ಶಿಲ್ಪಗಳಾಗಿವೆ.

ಮೇಲ್ಛಾವಣಿಯಲ್ಲಿ ಅಷ್ಟದಿಕ್ಪಾಲಕರು, ಶಿವನೆಸಗಿದ ತ್ರಿಪುರಸಂಹಾರ, ರಾಮಾಯಣದ ಸನ್ನಿವೇಶಗಳು ಶಿಲ್ಪಕೃತಿಗಳಾಗಿ ಅರಳಿವೆ.

ಅಲ್ಲಿರುವ ಬ್ರಹ್ಮೇಶ್ವರ ದೇವಾಲಯ ಭಗ್ನಾವಶೇಷಗಳಲ್ಲಿ ಕಾಣಬೇಕಾದ್ದು ವಿಷಾದ. ಇಲ್ಲಿ ಮಳೆ ಬಾರದಿದ್ದಲ್ಲಿ ಇಂದು ಸಾವಿರ ಕೊಡ ನೀರ ಅಭಿಷೇಕ, ಬ್ರಹ್ಮೇಶ್ವರನಿಗೆ ಮಾಡಿದರೆ ಮಳೆ ಬರುವುದೆಂಬ ನಂಬಿಕೆ ಇದೆ. ಹೀಗಾಗಿ ದೇವಾಲಯಕ್ಕೆ ಮಳೆಯ ಮಲ್ಲೇಶ್ವರ ದೇವಾಲಯ ಅನ್ನುವರು.

ಬಳ್ಳಿಗಾವೆಯ ವರ್ತಕ ಸೋದಿಶೆಟ್ಟಿ ಅನ್ನುವವನು ಸೋಮೇಶ್ವರ ದೇವಾಲಯದ ರೂವಾರಿ. ವರ್ತಕ ವಂಶದಲ್ಲಿ ಗಂಡು ಸಂತತಿ ಪ್ರಾಪ್ತಿಗಾಗಿ ದೇವಾಲಯದ ಜೀರ್ಣೋದ್ಧಾರಕ್ಕೆಂದು ದತ್ತಿ ನೀಡಿದ್ದು ಇಲ್ಲಿನ ಶಾಸನದಿಂದ ತಿಳಿಯುವುದು. ಕುಸುಮೇಶ್ವರ ದೇವಾಲಯ ಅನ್ನುವ ವೀರಭದ್ರೇಶ್ವರ ದೇವಾಲಯ ಸೋಮೇಶ್ವರ ದೇವಾಲಯದ ಹತ್ತಿರವಿದೆ. ಇದರಲ್ಲಿಯ ವೀರಭದ್ರದೇವನ ಪ್ರತಿಮೆಯ ಶಿಲ್ಪಿ ಸೊಗಸು ಬೆರಗೊಳಿಸುವಂಥದು.

ಪಂಚಲಿಂಗೇಶ್ವರ ಜಿಡ್ಡಿಕೆರೆಯ ಬಳಿಯಲ್ಲಿನ ಅನೇಕ ದೇವಾಲಯಗಳಲ್ಲೊಂದು. ಪಂಚ ಪಾಂಡವರೇ ಇಲ್ಲಿ ಐದು ಲಿಂಗ ಪ್ರತಿಷ್ಠಾಪನೆ ಮಾಡಿದ್ದು ಶಾಸನದಿಂದ ವಿದಿತ. ದುಃಸ್ಥಿತಿಯನ್ನು ಕಂಡು ಇಲ್ಲಿನ ಕೆಲ ವಿಗ್ರಹಗಳನ್ನು ಬೆಂಗಳೂರಿನ ವಸ್ತು ಸಂಗ್ರಹಾಲಯ ಹಾಗೂ ಕೇದಾರೇಶ್ವರ ದೇವಾಲಯದಲ್ಲಿ ಸ್ಥಳಾಂತರಿಸ ಲಾಗಿದೆ. ಇಲ್ಲೊಂದು ವಿದ್ಯಾಪೀಠ ಇತ್ತೆಂಬ ಊಹೆಗೆ ವಿಶಾಲಮಂಟಪ ಸಾಕ್ಷಿ ನೀಡುವುದು. ದೇವಾಲಯದ ಹಿಂಭಾಗ ಶ್ರೀಕಂಠೇಶ್ವರ ದೇವಾಲಯವಿದೆ. ಹಸಿರು ಕಲ್ಲಿನ ಲಿಂಗ ಇದರಲ್ಲಿದೆ. ಜಿಡ್ಡಿ - ಕೆರೆಯ ನೀರು ನಿರ್ದಿಷ್ಟಮಟ್ಟಕ್ಕೆ ಬಂದಾಗ ಸೂರ್ಯಪ್ರಕಾಶ ನೀರಲ್ಲಿ ಬಿದ್ದಾಗ ಅದರ ಕಾಂತಿಯಿಂದಾಗಿ ಲಿಂಗವು ದಿನದ ಒಂದೊಂದು ಕಾಲದಲ್ಲಿ ಒಂದೊಂದು ಬಣ್ಣದಿಂದ ಶೋಭಾಯಮಾನವಾಗಿ ಗೋಚರಿಸುತ್ತದೆ. ಎಂದು ಹೇಳುತ್ತಾರೆ. ಅದ್ವೈತ ಮತಯೋಗಿ ಯೊಬ್ಬ ಯೋಗೀಶ್ವರ ದೇವಾಲಯ ಕಟ್ಟಿಸಿದನು. ಉದಯಾದಿತ್ಯ ಎಂಬ ಯುದ್ಧಮಂತ್ರಿ ಇದಕ್ಕೆ ದತ್ತಿ ನೀಡಿರುವನು.

ಕೆರೆಯ ದಡದ ಮೇಲಿನ ಕಾಳಿಕಾಂಬಾ ದೇವಾಲಯದ ಬಾಗಿಲವಾಡಿನ ಮೇಲಿರುವ ಆನೆಸೊಂಡಿಲಿರುವ ಮನುಷ್ಯಾಕಾರದ ವಿಗ್ರಹದ ಕೆತ್ತನೆ ನಯನ ಮನೋಹರ. ಹಸು ಲಿಂಗವೊಂದರ ಮೇಲೆ ಹಾಲು ಅಭಿಷೇಕ ಮಾಡುತ್ತಿರುವ ಶಿಲ್ಪ ಗೋಡೆಯ ಮೇಲೆ ರಾರಾಜಿಸುವುದು.

ಬಳ್ಳಿಗಾವೆ ಸರ್ವಧರ್ಮ ಪೀಠ ಇತ್ತೆನ್ನುವುದಕ್ಕೆ ಶಿವ, ವಿಷ್ಣು ಜಿನ ದೇವಾಲಯಗಳೇ ಜೀವಂತ ಉದಾಹರಣೆಗಳು. ಚೌಕಿಮಠ ಎಂಬಲ್ಲಿ ಜಿನ ಬಿಂಬ ಅನಾಥವಾಗಿಯೂ ಪಾಳಾಗಿಯೂ ಬಿದ್ದಿದೆ. ಪ್ರತಿಮಾಯೋಗದಲ್ಲಿ ನಿಂತವಿಗ್ರಹ ಚಾವುಂಡ ಎಂಬವ ನಿರ್ಮಿಸಿದ್ದು. ಬೇತಾಳ ಅನ್ನುವ ಈ ವಿಗ್ರಹದ ತಲೆ ಮತ್ತು ಹೊಕ್ಕಳದಲ್ಲಿ ಎಣ್ಣೆ ಸುರಿದರೆ ಮಕ್ಕಳ ಹಠಮಾರಿತನ ನಿಲ್ಲುತ್ತದೆಯಂತೆ. ಇದಕ್ಕಾಗಿ ಹರಕೆ ಹಾಕಿಕೊಳ್ಳುವರು.

ಬಳ್ಳಿಗಾವೆ ಬೌದ್ಧಧರ್ಮದ ನೆಲೆವೀಡೂ ಆಗಿತ್ತು. ಬೌದ್ಧದೇವತೆ ತಾರಾಭಗವತಿ ವಿಗ್ರಹ ಇಲ್ಲಿ ದೊರಕಿದೆ. ನಾಡಹೆಗಡೆ ಹೆಂಡತಿ ನಾಗಿಯಕ್ಕಳಿಂದ ಈ ವಿಗ್ರಹ ನಿರ್ಮಾಣ ಗೊಂಡಿತು.

ಮೂರು ಪುರಗಳು, ಐದು ಮಠಗಳು, ಏಳು ಬ್ರಹ್ಮಪುರಿಗಳು, ಹಾಗೂ ಅನೇಕ ಅಗ್ರಹಾರ ಗಳಿದ್ದವು. ಬ್ರಹ್ಮಪುರಿ, ಅಗ್ರಹಾರ ಘಟಿಕಾಸ್ಥಾನಗಳು ಮತಧರ್ಮ ಸಂಬಂಧಿಸಿದ ವಿದ್ಯಾಕೇಂದ್ರ, ಬ್ರಹ್ಮಪುರಿ ಬ್ರಾಹ್ಮಣರಿದ್ದ ಮಹಾನಗರ, ಸಂಸ್ಕೃತ ಮಾಧ್ಯಮದಲ್ಲಿ ಉಪವೇದ, ಚತುರ್ವೇದ, ಹಾಗೂ ವೇದಾಂಗಗಳು ಅಗ್ರಹಾರಗಳಲ್ಲಿನ ಬೋಧನಾವಿಷಯಗಳಾಗಿದ್ದವು. ರಜೆಗಳನ್ನು ನೀಡಲಾಗುತ್ತಿತ್ತು. ರಜೆಗೆ ಅನಧ್ಯಯನ ಅನ್ನುತ್ತಿದ್ದರಲ್ಲದೆ ಕಲಿತಾದವನನ್ನು ಸ್ನಾತಕ ಅನ್ನುತ್ತಿದ್ದರು. ಬಳ್ಳಿಗಾವೆಯಲ್ಲಿ ಪಂಚಮಠ, ಹಿರಿಯ ಮಠ, ಪಂಚಲಿಂಗ ಮಠ, ಭೇರುಂಡೇಶ್ವರ ಮಠ, ತ್ರಿಪುರಮಠಗಳೆಂಬ ಐದು ಮಠಗಳಿದ್ದವು. ದಂಡಯಾತ್ರೆಯಲ್ಲಿ ವಿಜಯಕಾರಿಯಾಗಲು ಪ್ರಾರ್ಥನೆ ಸಲ್ಲಿಸ ಲೋಸುಗ ದೊರೆಗಳು ಇಲ್ಲಿ ಪಾಳಯ ಹೂಡುತ್ತಿದ್ದರು.

ದಕ್ಷಿಣ ಕೇದಾರ ಎಂದು ಹೆಸರಾದ ಇಲ್ಲಿ ಶಿವಲಿಂಗ ಪೂಜೆಯಿಂದ ಭೂಮಿಯೇ ರೋಮಾಂಚನಗೊಂಡಂತೆ ಪೈರುಪಚ್ಚೆಗಳು ನಿಂತಿರುತ್ತಿದ್ದವು. ವೇದಾಂಗಗಳ ಅಧ್ಯಯನ, ಶೈವ ಬ್ರಹ್ಮಚಾರಿಗಳ ಅನುಷ್ಠಾನ, ನಿತ್ಯ ಅನ್ನದಾಸೋಹ ಇಲ್ಲಿ ನಡೆಯುತ್ತಿತ್ತೆಂದು ಕೋಡಿಮಠದ ಶಾಸನ ವರ್ಣಿಸಿದೆ.

ಕಲಚೂರಿವಂಶದ ಬಿಜ್ಜಳದೊರೆಯ ದಂಡಾಧಿಪತಿ ಕೇಶಿರಾಜ ಎಂಬಾತ ಬಳ್ಳಿಗಾವೆಯ ಅಗ್ರಹಾರಗಳಿಗೆ ದತ್ತಿ ನೀಡಿದ. ಈ ಪ್ರದೇಶಗಳಿಗೆ 'ಕೇಶಿಹರ' ಅನ್ನುವರು. ಬಳ್ಳಿಗಾವೆ ಶಿಲ್ಪಿನಗರ ಎಂದು ಮಾಡಲು ಬಿಲ್ಲೋಜ ಮತ್ತು ನಾಗೋಜ ಎಂಬ ಶಿಲ್ಪಿಗಳನ್ನು ಹೊರಗಡೆಯಿಂದ ಕರೆದು ತಂದಿದ್ದರು. ಬಳ್ಳಿಗಾವೆಯ ಶಾಸನ ಕನ್ನಡ ಸಂಸ್ಕೃತದಲ್ಲಿದ್ದು ಗದ್ಯಪದ್ಯ ಧಾಟಿಯಲ್ಲಿವೆ. ಶಾಸನದ ಪಾಠಗಳು ಸುಂದರವೂ, ಪಾಂಡಿತ್ಯ ಪೂರ್ಣವೂ ಆಗಿವೆ. ಅನೇಕ ಕವಿಗಳು ಶಾಸನಕರ್ತರಾಗಿದ್ದರು. ಶಾಂತಿನಾಥ, ಪ್ರಮುಖ ಜೈನಕವಿ. ಚಾಲುಕ್ಯ ಭುವನೈಕ್ಯಮಲ್ಲನ ಆಶ್ರಯದಲ್ಲಿದ್ದ ಲಕ್ಷ್ಮನೃಪ ಎಂಬ ಕವಿ 'ಸುಕುಮಾರ ಚರಿತ' ಎಂಬ ಕಾವ್ಯ ಬರೆದಿರುವನು.

ಕೇದಾರೇಶ್ವರ ದೇವಸ್ಥಾನದ ಪ್ರಾಕಾರದಲ್ಲಿ ಶೂಲಬ್ರಹ್ಮಯ್ಯನ ಕಲ್ಲು ಎಂಬ ಕೆತ್ತನೆಯಿದೆ. 'ಒಬ್ಬ ವೇಳೆವಾಳಿ ತನ್ನ ರಾಜ ಮಡಿದಾಗ ತಾನೂ ಮಡಿದು ಕೃತಜ್ಞತೆ ತೋರಿಸಿದ ಶಿಲ್ಪಕೃತಿ ಇದು.' ಸ್ಥಂಭವೊಂದರ ಮೇಲಿಂದ ಬಿದ್ದು ಕೆಳಗಿರುವ ಬಾಣಗಳಿಗೆ ಸಿಕ್ಕಿ ಹಾಕಿಕೊಂಡು ಅಸುನೀಗಿದ - ಕರುಣಾಮಯ ದೃಶ್ಯ ಇದು.

ಜಿಡ್ಡಿಕೆರೆಯ ಬಳಿ ಭೇರುಂಡೇಶ್ವರ ವಿಜಯ ಸ್ತಂಭವಿದೆ. ಜಗುಲಿಯ ಮೇಲೆ ನಾಲ್ಕಡಿ ಎತ್ತರದ ಗಂಡಭೇರುಂಡ ವಿಗ್ರಹ ಒಂದೇ ಮಾನವ ದೇಹದಲ್ಲಿ ಹೊರಸೂಸಿದ ಎರಡು ಗಿಡುಗಗಳ ತಲೆಹೊಂದಿದೆ.

ಗತಕಾಲ ಅರಿಯುವುದೆಂದರೆ ಭವಿಷ್ಯದತ್ತ ಸಾಗುವ ದಾರಿ ಸುಸ್ಪಷ್ಟಗೊಳಿಸುವುದಾಗಿದೆ. ಅಂಧಕಾರಮಯವಾದ ಭವಿಷ್ಯವನ್ನು ವರ್ತಮಾನದಲ್ಲಿ ಅರ್ಥಮಾಡಿಕೊಳ್ಳಲು ಭೂತ ಕಾಲದ ನೆರವೂ ಅವಶ್ಯ. ನಡೆದು ಬಂದ ದಾರಿಯನ್ನು ಹಿಂದಿರುಗಿ ನೋಡುವ ಹವ್ಯಾಸ ಲಾಭದಾಯಕ. ಆದರೆ ಐತಿಹಾಸಿಕ ಸ್ಮಾರಕಗಳನ್ನು ಜತನದಿಂದ ಕಾಪಾಡುವ ವ್ಯವಸ್ಥೆ ಜಾರಿಗೆ ಬರುವಂತಾಗಬೇಕು. ಇದೇ ಘನ ಉದ್ದೇಶ ಸಾಕಾರಗೊಳಿಸಲು ಬಳ್ಳಿಗಾವೆಯ ಅವಶೇಷಗಳು ಚೇತನಗೊಳ್ಳಬೇಕಾಗಿವೆ. ಹಾಗಾದರೆ ನಾಡ ಇತಿಹಾಸಕ್ಕೆ ಬಲ್ಲಿಗಾವೆ ಬೆಳಕಿಂಡಿ ಆಗುವುದು.



# ಶ್ರೀವಾರಿ ಸೇವೆ – ಉತ್ತಮ ಪ್ರತಿಸ್ಪಂದನ

ಹೋದ ವರ್ಷದ ಬ್ರಹ್ಮೋತ್ಸವ ಸಮಯದಲ್ಲಿ ಆರಂಭವಾಗಿ ಕಂಚಿಯ ಶ್ರೀ ಶ್ರೀ ಜಯೇಂದ್ರ ಸರಸ್ವತಿಸ್ವಾಮಿಗಳ ಆಶೀರ್ವಾದದೊಡನೆ ಜನಪ್ರಿಯವಾದ ಸೇವೆಯಾಗಿ ಶ್ರೀವಾರಿಸೇವೆ ಕಾರ್ಯಕ್ರಮವು ದಿನ ದಿನವೂ ಪ್ರವರ್ಧಮಾನ ಹೊಂದುತ್ತಿದೆ ಎಂದು ತಿಳಿಸಲು ಸಂತಸವಾಗುತ್ತದೆ.

2000 ದ ವರ್ಷದಲ್ಲಿ ಡಿಸೆಂಬರಾನಲ್ಲಿ ಒಂದು ಸಾವಿರ ಮಂದಿ ಶ್ರೀವಾರಿ ಸೇವೆಯಲ್ಲಿ ಭಾಗವಹಿಸಿದ್ದರು. ಜನವರಿ 2001 ರಲ್ಲಿ 1800 ಮಂದಿ ಯಾತ್ರಿಕ ಸೇವೆಯ ಈ ಘನ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ದೇಶದ ನಾನಾ ಭಾಗಗಳಿಂದ ಬಂದಂತಹ ಇಪ್ಪತ್ತು ಸ್ವಯಂಸೇವಕ ವೃಂದಗಳು ಈ ಸೇವಾ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದವು. ಫೆಬ್ರವರಿಯಲ್ಲಿ 3200 ಮಂದಿಯೂ ಮಾರ್ಚ್ ತಿಂಗಳಿನಲ್ಲಿ 1800 ಮಂದಿಯೂ ಏಪ್ರಿಲ್ ತಿಂಗಳಿನಲ್ಲಿ 2000 ಮಂದಿ ಭಾಗವಹಿಸಿದ್ದರು.

ವಿವಿಧ ದೇವತಾ ನಾಮಕ ಭಜನಮಂಡಳಿಗಳು, ಶ್ರೀನಿವಾಸ ಸೇವಾ ಸಂಘಗಳೇ ಅಲ್ಲದೆ, ಸ್ಕೌಟ್ ಹಾಗೂ ಸೇವಾದಳಗಳೂ ಈ ಭಾಗವತ ಸೇವೆಯಲ್ಲಿ ಭಾಗವಹಿಸಿ ಯಾತ್ರಿಕರ ಪ್ರಶಂಸೆಯನ್ನು ಪಡೆಯುತ್ತಿವೆ. ರಾಜಮಹೇಂದ್ರಿ, ಉಭಯ ಗೋದಾವರೀ ಜಿಲ್ಲೆಗಳು, ವಿಶಾಖಪಟ್ನ, ಬೆಂಗಳೂರು, ಚೆನ್ನೈ ಮೊದಲಾದ ಕಡೆಗಳಿಂದಲೂ ಸ್ವಾಮಿಯ ಭಕ್ತರ ಸೇವೆಗೆ ಬಂದ ಬೃಂದಗಳು ಹಲವು ಹನ್ನೊಂದು.

ತಿರುಮಲೆಗೆ ಪ್ರತಿ ದಿನವೂ ಬರುವ ಅರ್ಧಲಕ್ಷಕ್ಕೂ ಹೆಚ್ಚುಮಂದಿ ಭಕ್ತರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ವ್ಯವಸ್ಥಿತವಾಗಿ, ಸುಸೂತ್ರವಾಗಿ, ಶಾಂತರೀತಿಯಿಂದ ದರ್ಶನ ಪಡೆಯಲು ಅನುಕೂಲವಾಗುವಂತೆ ಅವರಿಗೆ ಬೇಕಾದ ದಿಗ್ದರ್ಶನ, ಸೂಚನೆ ಸಲಹೆಗಳನ್ನು ನೀಡುವ ಕರಪತ್ರ ವಿತರಣೆ, ಮೌಖಿಕ ವಿವರಣೆ, ನಿಯಂತ್ರಣ - ಮೊದಲಾದ ಕಾರ್ಯಗಳಲ್ಲಿ ಸ್ವಚ್ಛಂದವಾಗಿ ಭಾಗವಹಿಸಲು ಅನುಕೂಲ ಮಾಡಿಕೊಡುವ ಭಾಗವತ ಸೇವೆಯೆಂದೇ ಹೆಸರಾದ ಶ್ರೀವಾರಿಸೇವೆಯಲ್ಲಿ ಭಾಗವಹಿಸಲು ಅಪೇಕ್ಷಿಸುವ ಭಕ್ತರು ತಿರುಮಲೆಯ ಅನ್ನದಾನಂ ಕಾಂಪ್ಲೆಕ್ಸ್‌ನಲ್ಲಿರುವ ಶ್ರೀವಾರಿಸೇವಾ ಸೆಲ್ ನಲ್ಲಿ ತಮ್ಮ ಹೆಸರನ್ನು ನೊಂದಾಯಿಸಿ, ಅವರಿಂದ ಸೇವಾಕ್ಷೇತ್ರದ ವಿವರಗಳನ್ನು ಪಡೆದು ಸೇವೆ ಸಲ್ಲಿಸಬಹುದಾಗಿದೆ.

ಯಾತ್ರಿಕ ಸೇವೆಯನ್ನು ವಾರಕಾಲ ಮಾಡುವ ಅಪೇಕ್ಷೆಯ ಭಕ್ತವೃಂದಗಳವರು ಇಪ್ಪತ್ತು ದಿನಗಳ ಮೊದಲು ತಿ.ತಿ.ದೇ. ಪೌರಸಂಬಂಧಾಧಿಕಾರಿಗಳಾದ ಶ್ರೀ ಎ. ಸುಭಾಷ್‌ಗೌಡ್ ಅವರಿಗಾಗಲೀ ಪೌರಸಂಬಂಧಾಧಿಕಾರಿ ಕಚೇರಿಯ ಅಧೀಕ್ಷಕರಾದ ಶ್ರೀ ವಿ. ಚಂದ್ರಶೇಖರ ನಾಯುಡು ಅವರಿಗಾಗಲೀ ತಮ್ಮ ಸೇವಾ ವಿವರಗಳನ್ನು ನೀಡಿ ಅವರಿಂದ ಅನುಮತಿಯನ್ನೂ ಹೆಚ್ಚಿನ ವಿವರಗಳನ್ನೂ ಪಡೆಯಬಹುದಾಗಿದೆ.

**ಆಸಕ್ತಸೇವಾ ಕಾಂಕ್ಷಿಗಳು ತಿರುಮಲೆಯ ಅನ್ನದಾನಂ ಕಾಂಪ್ಲೆಕ್ಸ್‌ನ ದೂರವಾಣಿ - 08574 - 79693 ಅಥವಾ ತಿರುಪತಿಯ ತಿ.ತಿ.ದೇ. ಆಡಳಿತ ಭವನದ ದೂರವಾಣಿ - 08574 - 2813** ಗೆ ಕರೆಮಾಡಿ ವಿವರಗಳನ್ನು ಪಡೆಯಬಹುದೆಂದು ಪತ್ರಿಕಾವರದಿ ತಿಳಿಸಿದೆ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

ಆಂಗ್ಲಮೂಲ : **ಡಾ॥ ಎನ್. ರಮೇಶನ್**, ಐ.ಎ.ಎಸ್.
ಕನ್ನಡಾನುವಾದ : **ಬಿ. ಎನ್. ಶ್ರೀನಿವಾಸನ್**. ಎಂ.ಎ.

## ಮಹಂತರ ಅಧೀನದಲ್ಲಿ ತಿರುಮಲೆ ಆಲಯ

(ಮುಂದುವರೆದಿದೆ.)

ಸಾಧಾರಣವಾಗಿ ಹೇಳುವುದಾದರೆ ತಿರುಮಲೆಯ ಆಲಯವನ್ನು ಮಹಂತರು ತೃಪ್ತಿಕರವಾಗಿಯೇ ನಡೆಸುತ್ತ ಬಂದರು ಎನ್ನಬೇಕು. ಆಲಯದ ಜೀರ್ಣೋದ್ಧಾರ ಹಾಗೂ ದುರಸ್ತಿ ಕೆಲಸಗಳಲ್ಲಿ ಸರ್ವತ್ರ ಅಭಿವೃದ್ಧಿಯನ್ನು ಗಮನಿಸಬಹುದು ಹಾಗೂ ಯಾತ್ರಿಕರಿಗೆ ಉಂಟಾಗುತ್ತಿದ್ದ ಸೌಲಭ್ಯಗಳೂ ಗಣನೀಯವಾಗಿ ಏಳ್ಗೆ ಪಡೆದವು.

ಆದರೆ ಇಂತಹ ದೊಡ್ಡ ಸಂಸ್ಥೆಗಳಲ್ಲಿ ಅನಿವಾರ್ಯವಾಗಿ ಉಂಟಾಗತಕ್ಕ ಒಳ ಗುದಿಯು ಮಹಂತರ ಪ್ರವೇಶದಿಂದ ಆರಂಭವಾಯಿತು ಎನ್ನಬೇಕು. ಮಹಂತರಿಗೂ ಆಲಯದ ಒಳಗಡೆ ಈಗಾಗಲೇ ಸೇರಿ ಹೋಗಿದ್ದ ಹಿತಾಸಕ್ತಿಗಳಿಗೂ ಒಳತೋಟಿಯುಂಟಾಗಿ ನಿರಂತರವಾಗಿ ಕೋರ್ಟು ಕಚೇರಿಯ ಮುಖ ನೋಡುವಂತಾಯಿತು. ಎರಡೂ ಪಕ್ಷಗಳ ಸಂಕುಚಿತ ಧೋರಣೆಗಳಿಂದಾಗಿ ಈ ಪವಿತ್ರವಾದ ಆಲಯದ ಹೆಸರನ್ನು ಕೋರ್ಟಿಗೆ ಎಳೆಯುವಂತೆ ಮಾಡಿದ್ದೇ ಅಲ್ಲದೆ, ಸಾಮಾನ್ಯವಾಗಿ ಎರಡೂ ಪಕ್ಷಗಳ ವೆಚ್ಚವನ್ನು ಆಲಯದ ಕೋಶಾಗಾರದಿಂದ ಕಟ್ಟುವಂತೆ ನ್ಯಾಯಾಲಯಗಳ ತೀರ್ಪು ಬರುತ್ತಿದ್ದುದರಿಂದ ಆಲಯದ ಸಂಪನ್ಮೂಲಕ್ಕೂ ಸಾಕಷ್ಟು ಧಕ್ಕೆಯುಂಟಾಯಿತು. ಹಣದ ದುರುಪಯೋಗ ಹಾಗೂ ಅಪವ್ಯಯಗಳೇ ಈ ಖಟ್ಲೆಗಳ ಸಾಧಾರಣ ಕಾರಣಗಳಾಗಿದ್ದವು. ಮೊದಲನೆ ಮಹಂತರಾದ ಸೇವಾದಾಸರ ಆಡಳಿತ ಕಾಲವಾದ 1843 ರಿಂದ ಫೆಬ್ರವರಿ 26, 1864 (ಅವರ ಮರಣದ ದಿನ) ವರೆಗೆ ಮಾತ್ರವೇ ಯಾವ ತಕರಾರೂ ಕೋರ್ಟಿನ ಮೆಟ್ಟಿಲು ಹತ್ತಲಿಲ್ಲ.

ಆಲಯದ ಸಾರ್ವಜನಿಕ ಆಡಳಿತದಲ್ಲಿ ಹಲವರಿಗೆ ಅವಕಾಶವನ್ನು ನೀಡಿದ 1822 ರಲ್ಲಿ ಜಾರಿಗೆ ಬಂದ ಬ್ರೂಸ್ ಕೋಡ್ ನಿಯಮಾವಳಿಯನ್ವಯವಾಗಿ ಹಾಗೂ 1843 ಫೆಬ್ರವರಿ 13 ರಂದು ಗೋಲ್ಡಿಂಗ್ ಹ್ಯಾಂ ಬರೆದ ಪತ್ರದಲ್ಲಿನ ''ಯಾವುದೇರೀತಿಯ ತಕರಾರನ್ನೂ ನ್ಯಾಯಾಲಯಗಳು ತೀರಿಸಬಲ್ಲವು'' ಎಂಬ



ಮಾತಿನ ಆಧಾರದಲ್ಲಿ ಭವಿಷ್ಯದ ತಕರಾರುಗಳು ನ್ಯಾಯಾಲಯಕ್ಕೆ ದಾರಿ ತೆರೆದವು. 1863 ರಲ್ಲಿ ಉಂಟಾದ ಧಾರ್ಮಿಕ ದತ್ತಿ ಕಾಯದೆಯ ಇಪ್ಪತ್ತನೇ ಕಲಮು ವಿವಾದ ಗ್ರಸ್ತವಾಗಿದ್ದು ಆಲಯದ ಬಗ್ಗೆ ತಕರಾರು ಅರ್ಜಿಗಳನ್ನು ಹಾಕಲು ಬೆಂಬಲ ನೀಡಿತು. ಮೊದಲನೆಯ ತಕರಾರು 1864 ರಲ್ಲಿಯೇ ನ್ಯಾಯಾಲಯವನ್ನೇರಿತು. ಈ ತಕರಾರು ನಿರ್ಣಯದ ವ್ಯವಹಾರದಲ್ಲಿ ದೇವಸ್ಥಾನದ ಸಂಪನ್ಮೂಲಕ್ಕೆ ಎಷ್ಟೊಂದು ದೊಡ್ಡ ರಂಧ್ರವುಂಟಾಯಿತೆಂಬುದನ್ನು ಫಸಲಿ 1283 ನೇ ವರ್ಷದ ಆಲಯ ಲೆಕ್ಕಗಳ ದಾಖಲೆಗಳನ್ನು ನೋಡಿ ತಿಳಿಯಬಹುದು.

''ಚಿತ್ತೂರು ಜಿಲ್ಲಾ ನ್ಯಾಯಾಲಯದಲ್ಲಿ ದೇವಸ್ಥಾನಗಳ ವಿಚಾರಣಕರ್ತರ ವಿರುದ್ಧ ಚಿನ್ನಜಿಯಂಗಾರು ಅಪ್ಪನ್ ಅಳಗಿಯ ಮಣವಾಳ ರಾಮಾನುಜರು ಹಾಗೂ ಅಡಿಯಪ್ಪನ್ ಚಕ್ರವರ್ತಿ ರಂಗಾಚಾರ್ಯ ಅವರುಗಳು ಮಾಡಿದ ತಕರಾರು ಖಟ್ಲೆ 14, 18, - ಇಸವಿ 1867 ರ ಬಗ್ಗೆ ಹಾಗೂ 1867 ಇಸವಿಯ 17 ನೇ ನಂಬರಿನ ಖಟ್ಲೆ (ಪರಕಾಲ ರಾಮಾನುಜ ಏಕಾಂಗಿ)ಯ ಬಗ್ಗೆ ನೀಡಲಾದ ಆಜ್ಞೆಯಂತೆ ಪ್ರತ್ಯುತ್ತರಗಳನ್ನು ದಾಖಲು ಮಾಡಿ ವಾದ ಸಿದ್ಧಗೊಳಿಸಲಾಗಿದೆ.

ಖಟ್ಲೆಯಲ್ಲಿನ ಉತ್ತರಗಳನ್ನು ದಾಖಲು ಪಡಿಸಿ ಕೇಸಿನ ಪರವಾಗಿ ವಾದ ಮಾಡಲು ಮಾಡಿದ ಖರ್ಚು ರೂ. 52, 258-6-2.''

### ಮಹಂತರ ಕಾಲದ ತಕರಾರುಗಳು

ಕ್ರಿ.ಶ. 1864 ರಲ್ಲಿ ಸೇವಾದಾಸರ ಉತ್ತರಾಧಿಕಾರಿಯಾಗಿ ಧರ್ಮದಾಸರು ಬಂದರು. ಇವರು ತಮ್ಮ ಸ್ವಂತ ಹಣದಿಂದ ರೂ. 2, 25, 457 -14-00 ಗಳನ್ನು ದೇವಸ್ಥಾನಕ್ಕೆ ತುಂಬಿಕೊಡಬೇಕೆಂದು ನ್ಯಾಯಾಲಯದ ಒಂದು ತೀರ್ಪು ಬಂದಿತು. ಈತನ ಉತ್ತರಾಧಿಕಾರಿಯಾಗಿ ಭಗವಾನ್‌ದಾಸರು 1880 ಯಲ್ಲಿ ಕಾರ್ಯಭಾರವನ್ನು ವಹಿಸಿಕೊಂಡು ಕ್ರಿ.ಶ. 1890 ರ ವರೆಗೆ ಮುಂದುವರಿದನು. ಧ್ವಜಸ್ತಂಭದ ಅಡಿಯಲ್ಲಿ ಪ್ರಾಚೀನ ಮಹಾರಾಜರು ಹುದುಗಿಸಿದ್ದ ಅಮೂಲ್ಯವಾದ ರತ್ನಗಳನ್ನು ಈತನು ಧ್ವಜಸ್ತಂಭದ ದುರಸ್ತಿಯ ನೆಪದಲ್ಲಿ ಎತ್ತಿಹಾಕಿದನೆಂದು ಆರೋಪಿಸ

ಲಾಯಿತು. ಆಲಯದ ಧನದಲ್ಲಿ ಸುಮಾರು ಹದಿನೈದು ಲಕ್ಷ ರೂಪಾಯಿಗಳನ್ನು ದುರುಪಯೋಗಗೊಳಿಸಿದನೆಂದು ಆರೋಪ ಹೊರಿಸಿ ತಪ್ಪಿತಸ್ಥನೆಂದು ತೀರ್ಮಾನವಾಗಿ ಮೊದಲಿಗೆ ಮೂರು ವರ್ಷದ ಕಠಿಣ ಶಿಕ್ಷೆ ವಿಧಿಸಲಾದರೂ; ಮೇಲ್ಮನವಿ ಮಾಡಿಕೊಂಡಾಗ ಈ ಶಿಕ್ಷೆಯನ್ನು 18 ತಿಂಗಳಿಗೆ ಇಳಿಸಲಾಯಿತು. ಈತನ ವಾರಸುದಾರ ರಾಮಕಿಶೋರ ದಾಸನೂ ಆಲಯದ ಹಣದಲ್ಲಿ ಐವತ್ತು ಸಾವಿರ ರೂಪಾಯಿಗಳನ್ನು ತಿಂದು ಹಾಕಿದನೆಂದು ಖಟ್ಲೆ ಹೂಡಲಾಯಿತು. ಇವನನ್ನು ಅಧಿಕಾರದಿಂದ ತೊಲಗಿಸಬೇಕೆಂದು ಮನವಿ ದಾಖಲು ಮಾಡುವಷ್ಟರಲ್ಲಿ ಈತನನ್ನು ಯಾರೋ ಕೊಲೆ ಮಾಡಿದರು. ಕಾರ್ವೇಟಿನಗರ ಹಾಗೂ ಕಾಳಹಸ್ತಿಗಳ ಜಮೀನುದಾರರಿಗೆ ಭಗವಾನ್ ದಾಸನು ನೀಡಿದ ಸಾಲ ಒಳ್ಳೆಯ ಬಂಡವಾಳ ಹೂಡಿಕೆಯ ವ್ಯವಹಾರವಾಗಿತ್ತಾದರೂ, ಜಿಲ್ಲೆಯ ಭೂಪಟದಿಂದಲೇ ಈ ಇಬ್ಬರೂ ಜಮೀಂದಾರರೂ ಈ ಸಾಲಗಳಿಂದಾಗಿಯೇ ನಿರ್ನಾಮವಾದರು.

ಈ ಅಧಿಕಾರಕ್ಕೆ ಮಹಂತರ ಆಯ್ಕೆ ಮಾಡುವ ವಿಧಾನ ಹಾಗೂ ಅವರ ಆಡಳಿತದ ವಿಧಾನಗಳ ಬಗ್ಗೆ 1869 ರಲ್ಲಿ ಹೊರಟಿದ್ದ ಒಂದು ತೀರ್ಪು (ಓ.ಎಸ್. - 14 - ಕ್ರಿ.ಶ. 1867) ಟಿಪ್ಪಣಿಸಹಿತವಾದ ಬೆಳಕು ಬೀರುತ್ತದೆ. ''ಈ ಸಂದರ್ಭದಲ್ಲಿ ತಿರುಪತಿಯ ಪಗೋಡಗಳ (ಆಲಯಗಳ) ಜಾತ್ಯತೀತ ಆಡಳಿತದ ಹೊಣೆಯ ಪ್ರತಿವಾದಿ ಮಹಂತ ಪ್ರಯಾಗದಾಸನ ನಿಲುವು ತಪ್ಪು ಎಂದು ನಾನು ಭಾವಿಸುತ್ತೇನೆ. ಶಾಸನಾನುಸಾರವಾಗಿ ನಿಯಮಿತನಾದ ಅವನ ಹಿಂದಿನ ಮಹಂತನ ಆಯ್ಕೆಯಿಂದಾಗಿಯೇ ಆತ ಈ ನಿಲುವನ್ನು ತಳೆಯಬೇಕಾಯಿತು. ಇದೇ ರೀತಿಯ ನಿಲುವನ್ನೇ ಸನ್ಯಾಸಿಯಾದಂತಹ ಈತನ ಉತ್ತರಾಧಿ ಕಾರಿಯೂ ತಳೆಯಬೇಕಾಗುತ್ತದೆ - ಎಂಬುದು ಸ್ಪಷ್ಟವಾಗಿದೆ. ಒಂದು ಹೊಸ ರೀತಿಯ ಶಾಸನದ ತಿದ್ದುಪಡಿ ಆಗುವವರೆಗೆ ಇದೇ ಪರಿಸ್ಥಿತಿ ಮುಂದುವರೆಯುತ್ತದೆ. ಹಳೆಯ ಪದ್ಧತಿಯಾದ ಸರ್ಕಾರೀ ಆಡಳಿತವು ಆ ಪದ್ಧತಿಯಿರುವಷ್ಟು ಕಾಲವೂ ಅತ್ಯಂತ ಸಮರ್ಥವಾಗಿ ಕೆಲಸಮಾಡಿದ್ದೇ ಅಲ್ಲದೆ, ಆರ್ಥಿಕವಾಗಿಯೂ ಲಾಭದಾಯಕವಾಗಿದ್ದಿತು ಅಥವಾ ವ್ಯವಹಾರದ ಬಗೆಯನ್ನೇ ತಿಳಿಯದಂತಹ ಸನ್ಯಾಸಿಗಳಿಗಿಂತ, ಹೆಚ್ಚು ಲೋಕಜ್ಞಾನವುಳ್ಳ ಬೇರೆ ಯಾರಿಗಾದರೂ ಆಡಳಿತವನ್ನು ಒಪ್ಪಿಸುವುದು ಸೂಕ್ತ ಆಗಿರುತ್ತದೆ. ಕಾರಣ ಒಬ್ಬ ಸನ್ಯಾಸಿಯು ಇನ್ನೊಬ್ಬ ಸನ್ಯಾಸಿಗಿಂತ ಹೆಚ್ಚು ಜಾತ್ಯತೀತನೆಂದು ಪರಿಗಣಿಸಲಾಗುವುದಿಲ್ಲ.''

ಈ ಮಹಂತನನ್ನು ತೆಗೆದು ಹಾಕಬೇಕೆಂದು ಚಿನ್ನ ಜಿಯಂಗಾರರು ಮಾಡಿದ ಮನವಿಯನ್ನು ಮದರಾಸಿನ ಉಚ್ಚ ನ್ಯಾಯಾಲಯವು ಆಸಕ್ತಿದಾಯಕವಾದಂತಹ ಕಾರಣಗಳಿಂದ ತಿರಸ್ಕರಿಸಿತು - ''ಆತ ಭ್ರಷ್ಟ ಕೆಲಸ ಮಾಡಿದ ಎಂಬುದರಲ್ಲಿ ಸಂದೇಹವಿಲ್ಲ. ಜಮೀಂದಾರರಿಗೆ ಕೊಟ್ಟ ಸಾಲವು ಭ್ರಷ್ಟಾಚಾರದ ಪರಾಕಾಷ್ಠ ಸ್ಥಿತಿ. ಈತನ ಹಿಂದಿನವರು ಇಂತಹದೇ ದ್ರೋಹವನ್ನೆಸಗಿರುವರು. ಇವನ ವಾರಸು ದಾರರೂ ಇದೇ ದಾರಿ ಹಿಡಿಯುವು ದೆಂಬುದರಲ್ಲಿ ಸಂದೇಹವಿಲ್ಲ. ಸಾಕಷ್ಟು ಸಂಪನ್ನನಾದ ಒಬ್ಬ ಅಪ್ರಾಮಾಣಿಕ ವ್ಯಕ್ತಿಯನ್ನು ತೆಗೆದುಹಾಕಿ ಇನ್ನೊಬ್ಬ ಅಷ್ಟೇ ಅಪ್ರಾಮಾಣಿಕ ನಾಗಿರುವ ವ್ಯಕ್ತಿ, ಅದೂ ಹಸಿವಿನಿಂದ ಇರುವಂತಹ ವ್ಯಕ್ತಿಯನ್ನು ನೇಮಕ ಮಾಡುವುದೇ ಇಲ್ಲಿನ ಪ್ರಶ್ನೆಯಲ್ಲ'. ಈ ಒಂದು ಮುಂದಾಲೋಚನೆ ಎಷ್ಟು ನಿಜವಾಗಿದ್ದಿತೆಂಬುದು ನಂತರದ ಉತ್ತರಾಧಿಕಾರಿಯಾದ ಭಗವಾನ್ ದಾಸನ ಬೇಜವಾಬ್ದಾರಿಯಿಂದ ತಿಳಿದುಬರುತ್ತದೆ. ನಂತರದ ಕಾಲದಲ್ಲಿಯೂ 1898 ರ 31 ನೇ ಖಟ್ಲೆಯೂ 1899 ರಲ್ಲಿ 10 ನೇ ಖಟ್ಲೆಯೂ ಉತ್ತರ ಆರ್ಕಾಟು ಜಿಲ್ಲೆಯ ಜಿಲ್ಲಾ ನ್ಯಾಯಾಧೀಶರ ಕಛೇರಿಯಲ್ಲಿ ದಾಖಲಾದವು. ಅವುಗಳ ಆರೋಪವೆಂದರೆ ರಾಮ ಕಿಶೋರದಾಸನು ಆಲಯದ ಭೂಮಿಗಳನ್ನು ಗುತ್ತಿಗೆಗೆ ನೀಡುವಾಗ ಐವತ್ತು ಸಾವಿರ ರೂಪಾಯಿಗಳ ಲಂಚ ಪಡೆದನೆಂಬುದೂ, ಗುತ್ತಿಗೆದಾರರಿಗೆ ಅನ್ಯಾಯದ ಅನುಕೂಲಗಳನ್ನು ಒದಗಿಸಿದನೆಂಬುದೂ ಆಗಿದ್ದವು. 1899 ನೆಯ ವರ್ಷದ ಹತ್ತನೇ ನಂಬರಿನ ಖಟ್ಲೆಯು ಆತನನ್ನು ವಿಚಾರಣಕರ್ತನ ಸ್ಥಾನದಿಂದ ತೆಗೆದು ಹಾಕಬೇಕೆಂಬ ಬೇಡಿಕೆಯಿಂದ ಕೂಡಿದ್ದಿತು. 1898 ರ ಖಟ್ಲೆಯು ಆಲಯದ ಆಡಳಿತ ವಿಷಯದಲ್ಲಿ ಒಂದು ವ್ಯಾಜ್ಯದ ತೀರ್ಮಾನಕ್ಕೆ ಬೇಡಿಕೆಯನ್ನು ಒಳಗೊಂಡಿದ್ದಿತು. ಈ ಖಟ್ಲೆಗಳ ವಿಚಾರಣೆಯಾಗುತ್ತಿದ್ದಾಗಲೇ ರಾಮ ಕಿಶೋರದಾಸನು ಕೊಲೆಯಾದ. ಇದರಿಂದಾಗಿ ಈತನ ಪದಚ್ಯುತಿಯ ವಿಷಯ ತೀರ್ಮಾನಾತೀತವಾಯಿತಾದರೂ ಮಿಕ್ಕ ವಿಷಯದಲ್ಲಿ ತೀರ್ಮಾನವಾಗಿ 1901 ರಲ್ಲಿ ಹಾಗೂ 1902 ರಲ್ಲಿ ಈ ತೀರ್ಮಾನದ ವಿರುದ್ಧ ಅಪೀಲು ಮಾಡಲಾಯಿತು. ಪ್ರಯಾಗದಾಸಜೀ ಹಾಗೂ ತಿರುಮಲೆ ಶ್ರೀರಂಗಾಚಾರ್ಯ ನಡುವಣ ವ್ಯಾಜ್ಯವನ್ನು ಒಂದು ಹೊಸ ಯೋಜನೆಯ ಅನುಮತಿಯಿಂದ ತೀರ್ಮಾನ ಮಾಡಿದರೂ (ಮದ್ರಾಸು ನ್ಯಾಯಾಲಯ ಪತ್ರಗಳು - 319, ಬಿಂದ 328) ಈ ಹೊಸ ಯೋಜನೆಯ ವಿರುದ್ಧ ಪ್ರೀವಿ ಕೌನ್ಸಿಲಿಗೆ ಹೋಗಲಾಯಿತು. ಇಲ್ಲಿ ಮತ್ತೊಂದು ಹೊಸ ಯೋಜನೆಯ ತೀರ್ಮಾನವಾಯಿತು.

## ನ್ಯಾಯಾಲಯದಿಂದುಂಟಾದ ಆಡಳಿತ ಸುಧಾರಣಾಯೋಜನೆ

1907 ರವರೆಗಿನ ಮಹಂತರ ಆಳ್ವಿಕೆಯ ಸ್ವರೂಪವನ್ನು ಈ ತೀರ್ಮಾನದ ಸಾರಾಂಶವನ್ನು ಗ್ರಹಿಸುವುದರಿಂದ ತಿಳಿಯಬಹುದಾಗಿದೆ.

1907 ಫೆಬ್ರವರಿ 3. ಲಾರ್ಡ್ ಮಕಾಲ್ಫಿನ್.

ಉಚ್ಚ ನ್ಯಾಯಾಲಯದ ತೀರ್ಪಿನ ಒಂದು ಭಾಗದ ಉದ್ಧರಣೆಯಿಂದ ಆಲಯದ ಚರಿತ್ರೆಯನ್ನು ತಿಳಿವುದರೊಂದಿಗೆ, ಹೊಸ ಯೋಜನೆಯ ಅಗತ್ಯಕ್ಕೆ ದಾರಿತೆಗೆದ ಪ್ರಸಂಗವನ್ನು ತಿಳಿಯಬಹುದು.

''ಉತ್ತರ ಆರ್ಕಾಟು ಜಿಲ್ಲೆಯ ತಿರುಪತಿ ಅಥವಾ ತಿರುಮಲೆಯಲ್ಲಿರುವ ಶ್ರೀ ವೆಂಕಟೇಶ್ವರಸ್ವಾಮಿ ಆಲಯವು ಒಂದು ಅತಿ ಪ್ರಾಚೀನ ಹಿಂದೂ ದೇವಾಲಯವಾಗಿದ್ದು, ಭಾರತದ ಎಲ್ಲ ಭಾಗಗಳಿಂದಲೂ ಜನರು ಇಲ್ಲಿ ಪೂಜೆ ಮಾಡಲು ಬರುತ್ತಾರೆ ಮತ್ತು ಇಲ್ಲಿನ ವಾರ್ಷಿಕ ಆದಾಯ ಎರಡರಿಂದ ಮೂರು ಲಕ್ಷ

ರೂಪಾಯಿಗಳು. ಆಂಗ್ಲ ಸರ್ಕಾರದ ಸ್ಥಾಪನೆ ಆಗುವುದಕ್ಕೆ ಮೊದಲು ಆಲಯದ ಆಡಳಿತವು ಇಲ್ಲಿನ ರಾಜನ ನೇರ ಆಳ್ವಿಕೆಗೆ ತತ್ಕಾಲಿಕವಾಗಿ ಸೇರಿದ್ದಿತು. ಆಂಗ್ಲರು ಇಲ್ಲಿಗೆ ಬಂದ ನಂತರ ಆಡಳಿತವು ಈಸ್ಟ್ ಇಂಡಿಯಾ ಕಂಪನಿಗೆ ಸೇರಿತು. 1817 ರಲ್ಲಿ ಮದರಾಸು ನಿಯಮಾವಳಿಯ 7 ನೇ ಕಲಮು ಉಂಟಾಗುವವರೆಗೆ ಆಡಳಿತವನ್ನು ಜಿಲ್ಲಾಧಿಕಾರಿಯು ಕಂದಾಯ ಮಂಡಲಿಯ ನಿಯಂತ್ರಣದಲ್ಲಿರುವಂತೆ ನೋಡಿ ಕೊಂಡಿದ್ದರು. 1841 ರಲ್ಲಿ ಈಸ್ಟ್ ಇಂಡಿಯಾ ಕಂಪನಿಯ ನಿರ್ದೇಶಕ ಮಂಡಳಿಯ ನಿರ್ದೇಶನದ ಪ್ರಕಾರ ಎಲ್ಲ ಭಾರತೀಯ ಧಾರ್ಮಿಕ ಸ್ಥಳಗಳ ಆಡಳಿತದಿಂದ ಕಂಪನಿ ಮುಕ್ತವಾಗುವಂತಾದಾಗ 1843 ರಲ್ಲಿ ಆಡಳಿತವನ್ನು ಆಲಯವಿರುವ ಬೆಟ್ಟದ ಬುಡದಲ್ಲಿರುವ ತಿರುಪತಿಯಲ್ಲಿ ನೆಲೆ ಗೊಂಡಿರುವ ಹತ್ತಿರಾಮಜಿ ಮಠದ ಸೇವಾದಾಸನ ವಶಕ್ಕೆ ಒಪ್ಪಿಸಲಾಯಿತು. ಸೇವಾದಾಸನಿಗೆ ಈ ಅಧಿಕಾರವನ್ನು ಒಪ್ಪಿಸಿದ ಸನ್ನದಿನಲ್ಲಿಯೇ ಆತನ ಉತ್ತರಾಧಿಕಾರಿಯು ಆಡಳಿತದಲ್ಲಿ ಉತ್ತರಾಧಿಕಾರಿಯಾಗಿರುವನೆಂದು ತಿಳಿಸಲಾಗಿದ್ದಿತು. ಈತನನ್ನು ವಿಚಾರಣ ಕರ್ತನೆಂದು ಹೆಸರಿಸಲಾಗಿದ್ದಿತು. 1864 ರಲ್ಲಿ ಸೇವಾದಾಸನು ಮರಣಹೊಂದಿದಾಗ ಧರ್ಮದಾಸನು ಅಧಿಕಾರಕ್ಕೆ ಬಂದು ಆತ 1880 ರಲ್ಲಿ ತೀರಿಕೊಳ್ಳಲು ಭಗವಾನ್ ದಾಸನು ವಿಚಾರಣಕರ್ತನಾಗಿ 1890 ರವರೆಗೆ ಇದ್ದು 1890 ರಿಂದ 1894 ರವರೆಗೆ ಮಹಾಬೀರ ದಾಸನು ವಿಚಾರಣಕರ್ತನಾಗಿದ್ದನು. 1895 ರಿಂದ 1900 ರವರೆಗೆ ರಾಮಕಿಶೋರದಾಸನು ವಿಚಾರಣಕರ್ತನಾಗಿದ್ದನು. ಈತನು ಉತ್ತರ ಆರ್ಕಾಟು ಜಿಲ್ಲಾ ನ್ಯಾಯಾಲಯದ 1898 ರ ಹಾಗೂ 1899 ರ ಖಟ್ಲೆಗಳಲ್ಲಿ ಪ್ರತಿವಾದಿ ಯಾಗಿದ್ದನು. ಆತನ ಮರಣಾನಂತರ ಈಗಿನ ಮಹಂತನು ಆತನ ಉತ್ತರಾಧಿಕಾರಿಯಾಗಿ ಪ್ರತಿವಾದಿಯ ಸ್ಥಾನದಲ್ಲಿದ್ದಾನೆ.

'1843 ರಲ್ಲಿ ಆಡಳಿತವನ್ನು ಸೇವಾದಾಸನಿಗೆ ಹಸ್ತಾಂತರಗೊಳಿಸಿದಾಗ ಮಹಂತರ ಆಡಳಿತವು ತೃಪ್ತಿದಾಯಕವಾಗಿರುತ್ತದೆಯೆಂದು ನಿರೀಕ್ಷಿಸಲಾಗಿದ್ದಿತು. ಆದರೆ ಸೇವಾದಾಸನ ನಂತರದ ಚರಿತ್ರೆಯು ಸಂಕ್ಷಿಪ್ತವಾಗಿ ಹೇಳಬೇಕೆಂದರೆ ವ್ಯರ್ಥ ವೆಚ್ಚಗಳ, ಹಣವನ್ನು ನುಂಗಿಹಾಕುವ ದಾಖಲೆಯಾಗಿದೆಯಷ್ಟೆ.

'ಈ ಹಿನ್ನೆಲೆಯಲ್ಲಿ ಜಿಲ್ಲಾ ನ್ಯಾಯಾಲಯವು ಒಂದು ಯೋಜನೆಯನ್ನು ತಯಾರಿಸಿತು. ಈ ಯೋಜನೆಯು ಉಚ್ಚ ನ್ಯಾಯಾಲಯದಲ್ಲಿ ಅಪೀಲು ಹೋದಾಗ ತಿದ್ದುಪಡಿ ಹೊಂದಿತು. ತಿದ್ದು ಪಡಿಹೊಂದಿದ ಮೇಲೆಯೂ ಈ ಹೊಸಯೋಜನೆ ಎರಡೂ ಪಕ್ಷಗಳಿಗೆ ಅನುಕೂಲಕರವೆಂದು ತೋಚದೆ, ಮಹಂತನು ರಾಜನ ಆಸ್ಥಾನಕ್ಕೆ ದೂರನ್ನು ತೆಗೆದುಕೊಂಡು ಹೋದ. ಈ ಮೇಲ್ಮನವಿಯಲ್ಲಿನ ಪ್ರಮುಖ ಅಂಶಗಳೆಂದರೆ 1) ಈ ಹೊಸ ಯೋಜನೆಯಿಂದಾಗಿ ಮಹಂತನ ಸ್ಥಾಯಿಯನ್ನು ಕೆಳಕ್ಕಿಳಿಸಿ, ಆತನ ಅಧಿಕಾರಕ್ಕೆ ಕುಂದುಂಟು ಮಾಡುತ್ತದೆ. 2) ನಿವ್ವಳ ಆದಾಯ ವಿಲ್ಲದಾಗಲೂ, ಉಂಟಾಗುವ ಸಂಭವವೇ ಇಲ್ಲದಾಗಲೂ ಹೆಚ್ಚಿನ ಹಣವನ್ನು ಬೇರೆ ಬೇರೆ ಕೆಲಸಗಳಲ್ಲಿ ತೊಡಗಿಸಲು ಈ ಯೋಜನೆಯು ಅವಕಾಶ ನೀಡುತ್ತದೆ. ಈ ಕೆಲಸಗಳು ಸ್ವತಃ ಒಳ್ಳೆಯವೇ ಆಗಿದ್ದರೂ, ಆಲಯಕ್ಕೆ ಸಂಬಂಧಿಸಿದಂತೆ ದೂರಾನ್ವಯ ವಾಗು ವಂತಹವುಗಳಾಗಿವೆ. ಹೀಗಾಗಿ ಪ್ರಸ್ತುತದಲ್ಲಿ ಅನಗತ್ಯವೂ ಭವಿಷ್ಯದಲ್ಲಿ ಭಂಗಕಾರಕವೂ ಆದ ಪ್ರಾವಧಾನಗಳಾಗಿವೆ' ಎಂದು ವಾದಿಸ ಲಾಗಿದ್ದಿತು.

ಈ ಮೇಲ್ಮನವಿಯ ವಿಚಾರಣೆಯನ್ನು ನಿರ್ದೇಶಕ ಮಂಡಳಿಯ ಅನುಪಸ್ಥಿತಿಯಲ್ಲಿ ನಡೆಸಲಾಯಿತು. ಆದರೆ ಈ ದೇಶದಲ್ಲಿನ ಇಂತಹದೇ ವಿಷಯಗಳಲ್ಲಿ ಅನುಭವ ಹೊಂದಿದ್ದಂತಹ ಸರ್ ರಾಬರ್ಟ್ ಫಿನ್ಲೆಯ ಉಪಸ್ಥಿತಿಯ ಲಾಭ ಶಾಸಕರಿಗೆ ಇದ್ದಿತು. ಪೂರ್ಣವಾದ ಚರ್ಚೆ ನಡೆಸಿ, ಅನುಭವೀಸಲಹೆಗಳನ್ನು ಪಡೆದನಂತರ ಆಸ್ಥಾನವು, ಆಲಯದ ಆಡಳಿತವನ್ನು ನೋಡಿಕೊಳ್ಳಲು ನೇಮಕವಾದ ಮಹಂತನ ಅಧಿಕಾರಕ್ಕೆ ಕುಂದುಂಟಾಗದಂತೆಯೂ, ಮನವಿಯ ಪೂರ್ವಾಪರಗಳಿಗೆ ವಿರೋಧ ವಿಲ್ಲದಂತೆಯೂ ಯೋಜನೆಯ ಒಳ ವಿವರಕ್ಕೆ ತಿದ್ದುಪಡಿ ತಂದು ಅಂಗೀಕರಿಸಿತು.

ಆ ಯೋಜನೆಯ ವಿವರ ಹೀಗೆ -

1) ಜಿಲ್ಲಾ ನ್ಯಾಯಾಲಯವು ಒಬ್ಬ ಖಜಾಂಚಿಯನ್ನು ಸಂಬಳದ ಮೇಲೆ ನೇಮಕ ಮಾಡುವುದು.

2) ಎಲ್ಲ ಧನರಾಶಿಯೂ ಖಜಾಂಚಿಯ ವಶದಲ್ಲಿರುವುದು. ಜಿಲ್ಲಾನ್ಯಾಯಾಲಯವು ಎಲ್ಲ ರೀತಿಯ ನೈವೇದ್ಯಗಳ, ಸಮರ್ಪಣೆಗಳ ಸೂಕ್ತ ಸಲ್ಲುವಳಿಗೆ ಹಾಗೂ ಸುಪರ್ದಿಗೆ ತಕ್ಕ ನಿಯಮಗಳನ್ನು ರೂಪಿಸುವುದು. ಆದಾಯದ, ಕೋಶದ, ನಿಯಮಗಳನ್ನು ರಚಿಸಿ, ಹೆಚ್ಚಿನ ಹಣವನ್ನು ಬಳಸುವ ಯೋಜನೆಗಳಿಗೆ ರೂಪ ಕಲ್ಪನಾ ಸೂತ್ರಗಳನ್ನು ತಯಾರಿಸಿ ನೀಡಿ, ಅವ್ಯವಹಾರಗಳ ನಿರೋಧಕ್ಕೆ ತಕ್ಕ ಮಾರ್ಗಸೂಚಿಸುವುದು. ಆಸ್ತಿಗಳನ್ನೂ, ಇತರತ್ರ ಆದಾಯಗಳನ್ನೂ, ಅಸಲು ಬಡ್ಡಿಗಳನ್ನೂ ನೋಡಿಕೊಳ್ಳಲು ನಿಯಮಗಳನ್ನು ಹಾಕಿಕೊಡುವುದು.

3. ಪ್ರತಿವರ್ಷದಲ್ಲಿಯೂ ವರ್ಷದ ಆರಂಭಕ್ಕೆ ಎರಡು ತಿಂಗಳ ಮೊದಲೇ ವರ್ಷದಲ್ಲಿ ಮಾಡತಕ್ಕಂತಹ ವೆಚ್ಚಗಳ ಅಂದಾಜು ಪಟ್ಟಿಯನ್ನು (ಮುಂಗಡ ಪತ್ರ) ತಯಾರಿಸಿ ಜಿಲ್ಲಾ ನ್ಯಾಯಾಲಯಕ್ಕೆ ಒಪ್ಪಿಸಬೇಕು.

4. ವಿಚಾರಣ ಕರ್ತನು ಮುಂಗಡ ಪತ್ರದಲ್ಲಿ ತಿಳಿಸಿರುವಂತಹ ಎಲ್ಲ ಧನವನ್ನೂ ವೆಚ್ಚಗಳಿಗಾಗಿ ಖಜಾಂಚಿಯು ಒದಗಿಸಿಕೊಡಬೇಕು. ಒಂದು ವೇಳೆ ಮುಂಗಡ ಪತ್ರದಲ್ಲಿ ಕಾಣಿಸಲಾಗದ ವೆಚ್ಚಗಳುಂಟಾದಲ್ಲಿ ಒಂದು ವರ್ಷದಲ್ಲಿನ ಒಟ್ಟು ಅಂತಹ ವೆಚ್ಚ 5000 ರೂಪಾಯಿಗಳ ವರೆಗಿದ್ದಲ್ಲಿ ಮಾತ್ರವೇ ಜಿಲ್ಲಾ ನ್ಯಾಯಾಲಯದ ಅನುಮತಿ ಪಡೆಯದೆ ಒದಗಿಸಿಕೊಡಬಹುದು.

5. ಪ್ರತಿ ವರ್ಷದ ನಂತರವೂ ಮೂರು ತಿಂಗಳ ಒಳಗೆ ವಿಚಾರಣಕರ್ತನು ಆ ವರ್ಷದ ಆದಾಯ ವೆಚ್ಚಗಳ ವಿವರವಾದ ಲೆಕ್ಕ ಪತ್ರಗಳನ್ನು ಒಪ್ಪಿಸಬೇಕು. ಜಿಲ್ಲಾನ್ಯಾಯಾಲಯವು ನೇಮಕ ಮಾಡಿದ ಲೆಕ್ಕ ಪರಿಶೋಧಕನು ಈ

ಲೆಕ್ಕಪತ್ರಗಳನ್ನು ಪರಿಶೀಲಿಸಬೇಕು. ಲೆಕ್ಕ ಪರಿಶೋಧಕರ ಪರಿಶೀಲನೆಯ ನಂತರ ಅವರ ವರದಿಯನ್ನು ನ್ಯಾಯಾಲಯವು ಹೇಳುವ ರೀತಿಯಲ್ಲಿ ಪ್ರಕಟಿಸಬೇಕು.

6. ಎಲ್ಲ ರೀತಿಯ ಹೆಚ್ಚುವರಿ ಹಣವನ್ನೂ ಆಲಯದ ಪ್ರಯೋಜನಕ್ಕಾಗಿಯೇ ಬಳಸಬೇಕು.

7. ಜಿಲ್ಲಾ ನ್ಯಾಯಾಲಯದ ಅನುಮತಿ ಯಿಲ್ಲದೆ ವಿಚಾರಣಕರ್ತನು ದೇವಸ್ಥಾನದ ಯಾವುದೇ ಸ್ಥಿರಾಸ್ತಿಯ ಭೂಮಿಯ ಅಡವು, ಪರಭಾರೆ, ಗುತ್ತಿಗೆಗೆ ಐದು ವರ್ಷಕ್ಕಿಂತ ಹೆಚ್ಚಿನ ವ್ಯವಧಿಗೆ ನೀಡುವಂತಿಲ್ಲ, ಮಾರುವಂತಿಲ್ಲ.

8. ಜಿಲ್ಲಾ ನ್ಯಾಯಾಲಯದ ಅನುಮತಿ ಯಿಲ್ಲದೆ ಯಾವುದೇ ಆಭರಣವನ್ನು ಇತರ ಆಸ್ತಿಯನ್ನುಮಾರುವಂತಿಲ್ಲ.

9. ಈ ಷರತ್ತುಗಳ ಹೊರತು ವಿಚಾರಣಕರ್ತನ ಅಧಿಕಾರ ಮಿಕ್ಕಂತೆ ಮೊದಲಿನಂತೆಯೇ ಇರಬೇಕು.

10. ಈ ಯೋಜನೆಯ ಅಂಶಗಳಿಗೆ ತಕ್ಕಂತೆ ಆಡಳಿತ ನಡೆಯುವಂತೆ ಮಾಡಲು ಆಸಕ್ತಿಯಿರುವ ಯಾರಿಗಾದರೂ ವಿಚಾರಣ ಕರ್ತರನ್ನೂಸೇರಿಸಿದಂತೆ - ನ್ಯಾಯಾಲಯವನ್ನು ಮೊರೆಹೋಗುವ ಅವಕಾಶವಿರತಕ್ಕದ್ದು.

11. ವಿಚಾರಣ ಕರ್ತರಿಗೆ ಅಥವಾ ಆಸಕ್ತರಾದ ಮತ್ತಾರಿಗಾದರೂ ಕಾಲದಿಂದ ಕಾಲಕ್ಕೆ ಈ ಯೋಜನೆಯನ್ನು ಮತ್ತೂ ಸುಗಮಗೊಳಿಸಲು ಹೊಸ ತಿದ್ದುಪಡಿಗಳಿಗಾಗಿ ಮೇಲ್ಮನವಿ ಸಲ್ಲಿಸುವ ಅವಕಾಶವಿರತಕ್ಕದ್ದು.

ಈ ಖಟ್ಲೆಯ ಎಲ್ಲ ವೆಚ್ಚಗಳೂ ವಿಚಾರಣ ಕರ್ತನ ನ್ಯಾಯವಾದ ವೆಚ್ಚ ಗಳೊಡನೆ, ಮೇಲ್ಮನವಿಯ ವೆಚ್ಚ ಹಾಗೂ ರಾಜಾಸ್ಥಾನಕ್ಕೆ ದೂರು ಒಯ್ದ ವೆಚ್ಚಗಳೆಲ್ಲವನ್ನೂ ಜಿಲ್ಲಾ ನ್ಯಾಯಾಲಯಕ್ಕೆ ತಿಳಿಸಿ, ಜಿಲ್ಲಾ ನ್ಯಾಯಾಲಯ ಹೇಳುವಂತೆ ಆಲಯದ ಧನದಿಂದ ಪೂರೈಸಬೇಕು.

**ಪ್ರಿವೀ ಕೌನ್ಸಿಲ್‌ನ ತೀರ್ಮಾನ**

ಪ್ರಿವಿ ಕೌನ್ಸಿಲ್ ತೀರ್ಮಾನದ ಪ್ರಾಮುಖ್ಯತೆಯೆಂದರೆ ಅದು ಮೇಲಿನ ನ್ಯಾಯಾಲಯದಲ್ಲಿ ಆಲಯದ ಹೆಚ್ಚುವರಿ ಧನವನ್ನು ಅನ್ಯಕಾರಣಗಳಲ್ಲಿ ವೆಚ್ಚಮಾಡುವ ಅತಿ ಉದಾರ ಯೋಜನೆಯನ್ನೂ ಅಂಗೀಕರಿಸದೆ ಹೋಗಿದ್ದು. ಉಚ್ಚ ನ್ಯಾಯಾಲಯದ ತೀರ್ಪಿನಲ್ಲಿದ್ದ ಔದಾರ್ಯ ಹೀಗೆ-

ಎರಡೂ ಪಕ್ಷಗಳೂ ಒಪ್ಪಿಕೊಂಡಂತೆ ಹೆಚ್ಚುವರಿ ಹಣವನ್ನು ಕೆಳಗಣ ರೀತಿಯಲ್ಲಿ ವೆಚ್ಚಮಾಡಬಹುದು.

1. ಕೆಳಗಣ ತಿರುಪತಿಯಲ್ಲಿ ಒಂದು ಕಾಲೇಜಿನ ಸ್ಥಾಪನೆ ಆಗಬೇಕು. ಇದು ಹಿಂದೂಗಳಲ್ಲಿ ಹಿಂದೂ ಧರ್ಮದ ಬಗ್ಗೆ ಹೆಚ್ಚಿನ ಶಾಸ್ತ್ರ ಜ್ಞಾನವನ್ನು ಹರಡುವ ಉದ್ದೇಶ ದಿಂದಾಗಬೇಕು. ''ಶ್ರೀ ವೆಂಕಟೇಶ್ವರ ವಿದ್ಯಾಶಾಲೆ'' ಎಂದು ಹೆಸರು ಹೊಂದಿ ಈ ಕಾಲೇಜು ವ್ಯವಸ್ಥಿತವಾದ ಪುಸ್ತಕ ಭಂಡಾರವನ್ನು ಹೊಂದಿರಬೇಕು. ವಿದ್ಯಾರ್ಥಿವಸತಿನಿಲಯ ಉಪನ್ಯಾಸಕ ಗೃಹಗಳೊಂದಿಗೆ ಕಾಲೇಜು ಸುಭದ್ರವಾದ ಕಟ್ಟಡವನ್ನು ಹೊಂದಿರಬೇಕು. ಕಾಲೇಜಿನ ವಾರ್ಷಿಕ ವೆಚ್ಚಗಳು ಮುಂದಿನ ಹೊಸ ಆಜ್ಞೆ ಆಗುವವರೆಗೆ 2400 ರೂಪಾಯಿಗಳಿಗೆ ಸೀಮಿತವಾಗಿರಬೇಕು.

2. ಮುಂದಿನ ಹೊಸ ಆಜ್ಞೆ ಹೊರಡುವವ ವರೆಗೆ, ಹಿಂದೂ ಧರ್ಮದ ಒಂದು ಅಥವಾ ಹೆಚ್ಚು ಶಾಸ್ತ್ರಗಳಲ್ಲಿ ಪರಿಣತಿ ಹೊಂದಿದ ಹಿರಿಯರಿಗೆ ವರ್ಷಕ್ಕೆ ಹನ್ನೆರಡು ಸಾವಿರ ರೂಪಾಯಿಗಳಿಗೆ ಮೀರದಂತೆ ಬಹುಮಾನ ಗಳನ್ನು ನೀಡಬೇಕು. ಕಾಲೇಜಿನ ಆಡಳಿತಕ್ಕೆ ಹಾಗೂ ಬಹುಮಾನ ವಿತರಣೆಯ ನಿಯಮ ನಿಬಂಧನೆಗಳನ್ನು ಕಾಲದಿಂದ ಕಾಲಕ್ಕೆ ಜಿಲ್ಲಾ ನ್ಯಾಯಾಲಯವು ಅಂಗೀಕರಿಸಿದ ಆಯ್ಕೆಯಾದ ಧರ್ಮಕರ್ತರ ಮಂಡಳಿಯು ರೂಪಿಸಿ ಕೊಡುತ್ತದೆ.

3. ಬೆಟ್ಟಕ್ಕೆ ಬರುವ ಅಸಂಖ್ಯಾತ ಭಕ್ತ ಯಾತ್ರಿಕರನ್ನು ನೋಡಿಕೊಳ್ಳುವ ಸಲುವಾಗಿ ಬೆಟ್ಟದ ಮೇಲೆ ಒಂದು ಆಸ್ಪತ್ರೆಯ ಏರ್ಪಾಡಾಗಬೇಕು.

4. ಆಲಯವನ್ನು ದರ್ಶಿಸಲು ಬರುವ ಎಲ್ಲ ರೀತಿಯ ಯಾತ್ರಿಕರ ಸೌಲಭ್ಯಕ್ಕಾಗಿ ಬೆಟ್ಟದ ಮೇಲೆ ಒಂದು ಸತ್ರವನ್ನು ನಿರ್ಮಾಣಮಾಡಿ, ಅದನ್ನು ನೋಡಿಕೊಳ್ಳಬೇಕು.

5. ಬೆಟ್ಟದ ಮೇಲೆ ಯಾತ್ರಿಕರಿಗಾಗಿ ಒಳ್ಳೆಯ ನೀರಿನ ಏರ್ಪಾಡು ಮಾಡಬೇಕು.

6. ಆಲಯಕ್ಕೆ ಬರಲು ದಾರಿಯನ್ನು ಸುಸಜ್ಜಿತಗೊಳಿಸುವುದಾಗಬೇಕು.

ವಿಚಾರಣ ಕರ್ತರಲ್ಲಿ ಕಡೆಯವರಾದ ಮಹಂತ ಪ್ರಯಾಗದಾಸರು ಮಹಂತರಲೆಲ್ಲ ಹೆಚ್ಚಿನ ಜ್ಞಾನಿಗಳಾಗಿದ್ದರು. ಆಲಯಕ್ಕೆ ಅಗತ್ಯವಾದ ಹಲವಾರು ಶಾಶ್ವತವಾದ ಕೆಲಸಗಳನ್ನೀತ ನಿರ್ವಹಿಸಿದರು. ಬೆಟ್ಟಕ್ಕೆ ಬರುವ ಸೋಪಾನ ಮಾರ್ಗವನ್ನು ದುರಸ್ತಿಗೊಳಿಸಿದರು. ಗೋಪುರಗಳ ಜೀರ್ಣೋದ್ಧಾರ ಮಾಡಿಸಿದರು. ಯಾತ್ರಿಕರ ಅನುಕೂಲಕ್ಕೆ ತಕ್ಕಂತೆ ಸತ್ರಗಳನ್ನು ಕೆರೆಗಳನ್ನು ನಿರ್ಮಿಸಿದರು. ಇಲ್ಲಿನ ಪರಿಶುಭ್ರತೆಯನ್ನು ಸಂರಕ್ಷಿಸಿ, ನೀರಿನ ಅನುಕೂಲ ಹೆಚ್ಚಿಸಿ ಆಲಯಕ್ಕೆ ಹೋಗುವ ಹಾದಿಯಲ್ಲಿನ ದೀಪಗಳ ಸೌಕರ್ಯ ಹೆಚ್ಚಿಸಿದರು. ಆಲಯದ ಮಧ್ಯ ಭಾಗದ ವಿಮಾನವನ್ನು ಚಿನ್ನದ ಮುಲಾಮಿನಿಂದ ಗಿಲೀಟು ಮಾಡಿಸಿದರು. ಆಲಯದ ಶಾಸನಗಳ ಸಂಪುಟಗಳ ಪ್ರಕಟನೆಗಾಗಿಯೂ ಅವರಿಗೆ ನಮ್ಮ ಕೃತಜ್ಞತೆಗಳು ಸಲ್ಲುತ್ತವೆ.

ವಿಚಾರಣ ಕರ್ತರ ಸ್ಥಾನಕ್ಕೆ ಮಹಂತರನ್ನು ಆಯ್ಕೆ ಮಾಡಲು ಮುಖ್ಯಕಾರಣವೆಂದರೆ ಅವರು ಯಾವುದೇ ಪಂಥಕ್ಕೂ ಸೇರ ದವರಾಗಿದ್ದರು. ಅವರ ವ್ಯಕ್ತಿಗತವಾದ ಕೊರತೆಗಳು ಏನೇ ಇದ್ದರೂ ಅವರೆಲ್ಲ ಆಲಯದ ಪರಂಪರೆಯ ಮರ್ಯಾದೆಯನ್ನು ಎತ್ತಿಹಿಡಿದು, ಎಲ್ಲ ಹಿಂದೂಗಳಿಗೂ ಏಕರೀತಿಯ ಪ್ರಾಧಾನ್ಯ ನೀಡಿದರು. ಎಲ್ಲ ಸ್ತರಗಳಲ್ಲಿನ ಎಲ್ಲ ತೀರ್ಪುಗಳಲ್ಲಿಯೂ ಖಟ್ಲೆಗಳ ವೆಚ್ಚಗಳನ್ನು ಆಲಯದ ಲೆಕ್ಕಕ್ಕೇ ಸೇರಿಸಿರುವುದು ಕಂಡುಬರುತ್ತದೆ. ಈ ಅಂಶದಿಂದಲೇ ಸ್ಥಳೀಯ ವಿವಾದಗಳಿಂದ, ಸ್ವಂತದ ಹಿತಾಸಕ್ತಿಗಳಿಂದಾಗಿ ಆಲಯದ ಮೇಲೆ ಉಂಟಾದ ಹೊರೆಯನ್ನು ತಿಳಿಯಬಹುದು. ಆಲಯದಲ್ಲಿ ಅಪವ್ಯಯ ವಾದ ಸೊಮ್ಮಿಗಿಂತಲೂ, ದೂರುಗಳಲ್ಲಿನ ವೆಚ್ಚಗಳೇ ಹೆಚ್ಚು ಸಂದರ್ಭಗಳಲ್ಲಿ ಹಲವು ಪಟ್ಟು ಹೆಚ್ಚಾಗಿರುತ್ತಿದ್ದವು ಆದ್ದರಿಂದಾಗಿ ಆಲಯವು ಎರಡೂ ದಿಕ್ಕಿನಿಂದ ನಷ್ಟಕ್ಕೆ ಪಕ್ಕಾಗಿ ಸೊರಗಿತು.

(ಮುಂದುವರೆಯುವುದು.)

## ವಾರ್ತಾ ಲಹರಿ

### ವೈಭವದ ಪದ್ಮಾವತೀ ಪರಿಣಯ

ತಿರುಮಲೆಯಲ್ಲಿ ವಾರ್ಷಿಕ ಪದ್ಮಾವತೀ ಪರಿಣಯೋತ್ಸವ ಮೇ 1, 2, 3 ರಂದು ಸಾಂಗವಾಗಿ ನಡೆದು ಯಶಸ್ವಿಯಾಯಿತು. ತಿರುಮಲೆಯಲ್ಲಿನ ಆಲಯದಿಂದ ಶ್ರೀ ಮಲೆಯಪ್ಪಸ್ವಾಮಿಯನ್ನೂ ಉಭಯ ನಾಯಕಿಯರನ್ನೂ ಬೇರೆ ಬೇರೆಯಾಗಿ ದಕ್ಷಿಣ ಮಾಡ ವೀಧಿಯ ಮೂಲಕ ನಾರಾಯಣಗಿರಿ ಉದ್ಯಾನವನಗಳಿಗೆ ತಂದು ಅಲ್ಲಿ ವಿವಾಹ ಮಹೋತ್ಸವ ಕಾರ್ಯಕ್ರಮವನ್ನು ನೆರವೇರಿಸಿ ಒಟ್ಟು ಸೇರಿದ ವಧೂವರರನ್ನು ಉತ್ತರ ಮಾಡವೀಧಿಯ ಮೂಲಕ ಮೆರವಣಿಗೆಯಲ್ಲಿ ಆಲಯಕ್ಕೆ ಪುನಃ ತಂದು ಸೇರಿಸುವ ವೈದಿಕ ಸಾಂಸ್ಕೃತಿಕ ಕಾರ್ಯಕ್ರಮಗಳು ಮೂರೂ ದಿನಗಳಲ್ಲಿಯೂ ಅಪಾರ ಜನಸಂಖ್ಯೆಯನ್ನು ಆಕರ್ಷಿಸಿ ಕಣ್ಣಿಗೆ ಹಬ್ಬ ಮಾಡಿದವು.

ಮಂಗಳವಾರದಂದು ಮಧ್ಯಾಹ್ನ ಶುಚಿರ್ಭೂತರಾದ ಸ್ವಾಮಿ ಸರ್ವಾಲಂಕಾರ ಭೂಷಿತರಾಗಿ ಆನೆಯ ವಾಹನದಲ್ಲಿ ವರನಾಗಿ ಆಲಯದಿಂದ ಹೊರಬಂದರೆ ಶ್ರೀ ಭೂದೇವಿಯರನ್ನು ಬಂಗಾರದ ತಿರುಚ್ಚಿಯಲ್ಲಿ ವಿವಾಹ ಮಂಟಪಕ್ಕೆ ಕರೆತರಲಾಯಿತು. ನಾರಾಯಣಗಿರಿಯ ಉದ್ಯಾನವನದಲ್ಲಿ ತಾತ್ಕಾಲಿಕ ವಿವಾಹವೇದಿಕೆ ಸುಂದರವಾಗಿ ಸಭದ್ರವಾಗಿ ನಿರ್ಮಾಣಗೊಂಡು ಸ್ವಾಮಿಯ ಆಗಮನಕ್ಕೆ ಕಾದು ನಿಂತಿದ್ದಿತು. ವಧೂವರರ ಆಗಮನವಾದ ಮೇಲೆ ಮದುವೆಯ ಕಲಾಪಗಳು ಉತ್ಸಾಹದಿಂದ ನಡೆದು, ಪರಿಣಯವಾದ ನಂತರ ದೇವದಂಪತಿಗಳಿಗೆ ಪೂಜೆ ಮಾಡಿ ಪುರಾಣವಾಚನ ಸಂಗೀತ ಸೇವೆಗಳನ್ನು ಸಮರ್ಪಿಸಲಾಯಿತು. ಮೊದಲ ದಿನದ ಈ ಪರಿಣಯೋತ್ಸವದಲ್ಲಿ 5000 ರೂ. ಆರ್ಜಿತ ಶುಲ್ಕ ಸಲ್ಲಿಸಿದ 48 ಮಂದಿ ಭಕ್ತರು ವಧೂವರರ ಪರವಾಗಿ ಬೀಗರಾಗಿ ಭಾಗವಹಿಸಿದರು. (ಒಟ್ಟು 2 ಲಕ್ಷ 40 ಸಾವಿರ ರೂಪಾಯಿಗಳ ಸಂದಾಯವಾಯಿತು) ನಂತರ ನೂತನ ವಧೂವರರನ್ನು ಉತ್ತರ ಮಾಡವೀಧಿಯಲ್ಲಿ ಮೆರವಣಿಗೆಯಲ್ಲಿ ಕರೆತಂದು ಆಲಯವನ್ನು ಸೇರಿಸಲಾಯಿತು.

ಬುಧವಾರ ಸ್ವಾಮಿಯು ಅಶ್ವವಾಹನದಲ್ಲಿ ವಿವಾಹವೇದಿಕೆಗೆ ಆಗಮಿಸಿದರೆ ಗುರುವಾರ ದಂದು ಗರುಡವಾಹನರಾಗಿ ನಾರಾಯಣಗಿರಿಗೆ ಆಗಮಿಸಿದರು. ಬುಧವಾರದ ದಿನ 33 ಮಂದಿ ಭಕ್ತರು ಒಟ್ಟು 1 ಲಕ್ಷ 65 ಸಾವಿರ ರೂಗಳನ್ನು ಸಂದಾಯ ಮಾಡಿ ವಧೂವರರ ಪರಿವಾರದ ಮಂದಿಯಾಗಿ ಭಾಗವಹಿಸಿದರು. ಕವಿ ಸಮ್ಮೇಳನ ಹರಿಕಥೆ ಸಂಗೀತಗಳು ನಡೆದವು.

ಪದ್ಮಾವತೀ ಪರಿಣಯದಲ್ಲಿ ಜಿಯಂ ಗಾರರು, ತಿ.ತಿ.ದೇ. ಕಾರ್ಯನಿರ್ವಹ ಣಾಧಿಕಾರಿ ಡಾ|| ಪಿ. ಕೃಷ್ಣಯ್ಯ, ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಸಿ.ಎಸ್.ಓ. ಶ್ರೀ ಕಿಷೋರಕುಮಾರ್, ಸಿ.ಎಫ್.ಓ. ಶ್ರೀ ವೆಂಕಟರಾಮಯ್ಯ ಡೆ. ಇ. ಓ. ಶ್ರೀ ನಾಗೇಶ್ವರ ರಾವ್ ಮೊದಲಾದವರು ಭಾಗವಹಿಸಿದ್ದರು.

### ವೈಭವದ ಬ್ರಹ್ಮೋತ್ಸವ

ತಿರುಪತಿ - ಮದರಾಸುಗಳ ನಡುವೆ ನಗರಿಯ ಸಮೀಪದಲ್ಲಿರುವ ನಾಗುಲಾಪುರದಲ್ಲಿ ನೆಲೆಸಿರುವ ಶ್ರೀ ವೇದನಾರಾಯಣಸ್ವಾಮಿ ಯವರ ವಾರ್ಷಿಕ ಬ್ರಹ್ಮೋತ್ಸವಗಳು 5-5-2001 ರಿಂದ 14-5-2001 ರವರಿಗೆ ಹತ್ತು ದಿನಗಳ ಕಾಲ ವೈಭವದಿಂದ ನಡೆದು ಯಶಸ್ವಿಯಾದವು.

ನಾಗುಲಾಪುರದಲ್ಲಿನ ವೇದನಾರಾಯಣ ಸ್ವಾಮಿ ವೇದೋದ್ಧಾರಕ - ಮತ್ಸ್ಯರೂಪಿ. ನಡುವಿನಿಂದ ಮೇಲ್ಭಾಗ ನಾರಾಯಣನಾಗಿ, ಕೆಳಭಾಗ ಮೀನಿನಾಕಾರ ಪಡೆದು ನಿಂತಿರುವ ಮೂರ್ತಿ. ಆತನ ಉತ್ಸವ ಮೂರ್ತಿ ಮಾತ್ರ ವಿಷ್ಣುಮೂರ್ತಿಯ ರೀತಿಯಲ್ಲಿರುವುದು. ಜೊತೆಗೇ ಶ್ರೀದೇವಿ ಭೂದೇವಿಯರೂ ಇರುವರು. ಜೀರ್ಣವಾಗಿದ್ದಂತಹ ವೇದ ನಾರಾಯಣ ಸ್ವಾಮಿ ಆಲಯವನ್ನು ಪುನರ್ನವೀಕರಿಸಿ ಪೂಜಾದಿಗಳ ಏರ್ಪಾಡು ಮಾಡಿ, ಸುತ್ತ ಒಂದು ಊರನ್ನು ಎಬ್ಬಿಸಿ ಅದಕ್ಕೆ ತನ್ನ ತಾಯಿ ನಾಗುಲಾಂಬೆಯ ಹೆಸರನ್ನಿತ್ತು ನಾಗುಲಾಪುರವೆಂದು ಕರೆದವನು ಕರ್ನಾಟಕ ರಾಜ್ಯ ರಮಾರಮಣ ಶ್ರೀಕೃಷ್ಣದೇವರಾಯ.

ಮೇ ತಿಂಗಳ ಐದರಂದು ಸಂಜೆ ಅಂಕುರಾರ್ಪಣೆ ಹೊಂದಿದ ಬ್ರಹ್ಮೋತ್ಸವಗಳು 6 ರಂದು ಮಧ್ಯಾಹ್ನ ಧ್ವಜಾರೋಹಣದಿಂದ ಆರಂಭ ಹೊಂದಿದವು. ಅಂದು ಸಂಜೆ ಸ್ವಾಮಿ ಉಭಯನಾಯಕಿಯರೊಡನೆ ದೊಡ್ಡ ಶೇಷವಾಹನದಲ್ಲಿ ಊರ ಮೆರವಣಿಗೆಗೆ ಹೊರಟು ಭಕ್ತರ ಮನತುಂಬಿನಿಂತರು. 14-5-2001 ರ ಚಕ್ರಸ್ನಾನದ ದಿನದವರೆಗೆ ದಿನವೂ ಬೆಳಗ್ಗೆ ಸಂಜೆಗಳಲ್ಲಿ ವಿವಿಧ ವಾಹನಗಳನ್ನೇರಿ ಸ್ವಾಮಿ ದರ್ಶನವಿತ್ತದ್ದನ್ನು ಬಹುಮಂದಿ ಆಸಕ್ತಿ, ಆದರ, ಭಕ್ತಿ, ಗೌರವ, ವಿನಯ, ಶ್ರದ್ಧೆಗಳಿಂದ ಕಂಡು ಮಾಧವಲೀಲಾವಿನೋದವನ್ನು ಕೊಂಡಾಡಿದರು. ಮೇ 10 ರಂದು ಗರುಡೋತ್ಸವದ ದಿನ ಅತಿಹೆಚ್ಚಿನ ಜನ ಸೇರಿದ್ದರು. 13 ರಂದು ರಥೋತ್ಸವ. ಅಂದು ಸುತ್ತಮುತ್ತಲ ಊರಿನವರೇ ಅಲ್ಲದೆ ದೂರದೂರುಗಳಿಂದಲೂ ಜನಸೇರಿ ಸ್ವಾಮಿಯ ರಥವನ್ನು ಹೃದಯ ಪಥದಲ್ಲಿ ನಿಲ್ಲಿಸಿಕೊಂಡರು. ಅಂದು ಸ್ವಾಮಿಗೆ ಕಲ್ಯಾಣೋತ್ಸವ ಕೂಡ ನಡೆಯಿತು. 14-5-2001 ರಂದು ಸೋಮವಾರ ಸಂಜೆ ಧ್ವಜಾವರೋಹಣ ಸಮಾರಂಭ ನಡೆಯಿತು.

### ಸ್ವಾಮಿ ಸೇವೆಯಲ್ಲಿ ಮುಖ್ಯ ಮಂತ್ರಿದ್ವಯರು

ಕರ್ನಾಟಕದ ಮುಖ್ಯಮಂತ್ರಿ ಶ್ರೀ ಎಸ್. ಎಂ. ಕೃಷ್ಣ ಹಾಗೂ ಭಾರತದಲ್ಲಿ ರಾಜ್ಯಾಂಗಬದ್ಧವಾಗಿ ನೂತನವಾಗಿ ನಿರ್ಮಿತವಾಗಿರುವ ಛತ್ತೀಸ್‌ಗಢ ರಾಜ್ಯದ ಪ್ರಥಮ ಮುಖ್ಯಮಂತ್ರಿ ಅಜಿತ್‌ಜೋಗಿ - ಇವರೀರ್ವರೂ ತಿರುಮಲೆಯ ಸ್ವಾಮಿಯನ್ನು ಸಂದರ್ಶಿಸಿ ಆಶೀರ್ವಚನ ಪಡೆಯಲು ಮೇ 1 ರಂದು ಮಂಗಳವಾರ ಆಗಮಿಸಿದ್ದರು. ಅಂದು ಕರ್ನಾಟಕ ಮುಖ್ಯಮಂತ್ರಿಯ ಹುಟ್ಟುಹಬ್ಬವೂ ಆಗಿದ್ದುದರಿಂದ, ದೇವರ ಸನ್ನಿಧಿಯಲ್ಲಿ ಮಾಡಬಹುದಾದ ಪ್ರಾರ್ಥನೆಯಿಂದ ಹುಟ್ಟುಹಬ್ಬದ ಆಚರಣೆ ಅರ್ಥಪೂರ್ಣ ಎಂದು

ಭಾವಿಸಿದ ಶ್ರೀ ಎಸ್.ಎಂ. ಕೃಷ್ಣ ಅವರು ತಮ್ಮ ಶ್ರೀಮತಿಯವರ ಸಂಗಡ ರೇಣಿಗುಂಟದ ಬಳಿ ತಮ್ಮ ಹೆಲಿಕಾಪ್ಟರಿನಲ್ಲಿ ಇಳಿದು ಕಾರಿನಲ್ಲಿ ತಿರುಮಲೆಯನ್ನು ಸೇರಿದರು.

ತಿರುಮಲೆಯ ಆಲಯದಲ್ಲಿ ಅವರನ್ನು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ ಅವರು ಇತರರೊಡನೆ ಸ್ವಾಗತಿಸಿದರು. ಮುಖ್ಯಮಂತ್ರಿಗಳಿಗೆ ಸ್ವಾಮಿಯ ವೈಭವವನ್ನು ಕುರಿತು ಹೇಳಿದ ನಂತರ ರಂಗನಾಯಕ ಮಂಟಪದಲ್ಲಿ ಅವರುಗಳನ್ನು ಆಸೀನಗೊಳಿಸಿ, ವೇದಾಶೀರ್ವದ ನೀಡಿ ಪ್ರಸಾದಗಳನ್ನು ಹಂಚಲಾಯಿತು.

### ನೂತನ ಆರ್ಥಿಕ ಸಲಹಾದಾರ



ಆಂಧ್ರಪ್ರದೇಶದ ಅಕೌಂಟೆಂಟ್ ಜನರಲ್ ಅವರ ಕಚೇರಿಯಲ್ಲಿ ಲೆಕ್ಕ ಪತ್ರ ತಪಾಸಣಾ ವಿಭಾಗದಲ್ಲಿ ನಿರ್ದೇಶಕರಾಗಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ರಾಮನಾಗಯ್ಯ ಅವರನ್ನು, ತಿ.ತಿ. ದೇವಸ್ಥಾನಗಳ ಆರ್ಥಿಕ ಸಲಹಾದಾರ ಮತ್ತು ಪ್ರಧಾನ ಲೆಕ್ಕಾಧಿಕಾರಿಗಳಾದ ಶ್ರೀ ಬಾಲಸುಬ್ರಹ್ಮಣ್ಯಂ ಅವರು ಈಚೆಗೆ ನಿವೃತ್ತರಾದುದರಿಂದ ತೆರವಾದ ಸ್ಥಾನದಲ್ಲಿ ನೇಮಕ ಕೆಲಸಮಾಡಲು ನಿಯೋಜಿಸಲಾಗಿದೆ. ಎರಡು ವರ್ಷಗಳ ಕಾಲ ಅವರ ಅಧಿಕಾರಾವಧಿ ಎಂದು ತಿಳಿಸಲಾಗಿದ್ದು ಶ್ರೀಯುತರು ಅಧಿಕಾರವನ್ನು ಸ್ವೀಕರಿಸಿದ್ದಾರೆ.

### ಪುರಾಣ ಪ್ರಬೋಧ ಪರೀಕ್ಷೆಗಳು : ಫಲಿತಾಂಶ ಪ್ರಕಟನೆ

ತಿ. ತಿ.ದೇ.ಗಳ ಧರ್ಮಪ್ರಚಾರ ಪರಿಷತ್ತು ತೆಲುಗು ವಿದ್ಯಾರ್ಥಿಗಳಿಗಾಗಿ ಪ್ರತಿವರ್ಷ ನಡೆಸುವ ಪುರಾಣ ಪ್ರಬೋಧ ಪರೀಕ್ಷೆಗಳ ಫಲಿತಾಂಶಗಳು ಹೊರಬಿದ್ದಿವೆ. ಫಲಿತಾಂಶಗಳನ್ನು ಘೋಷಿಸುವ ಪತ್ರಿಕಾ ಸಮಾವೇಶದಲ್ಲಿ ಧರ್ಮಪ್ರಚಾರ ಪರಿಷತ್ತಿನ ಕಾರ್ಯದರ್ಶಿ ಪ್ರಾಚಾರ್ಯ ಎಚ್. ಎಸ್. ಬ್ರಹ್ಮಾನಂದ ಅವರು ಫಲಿತಾಂಶದ ವಿವರಗಳನ್ನು ದಾಖಲಿಸಿದರು.

ಆಂಧ್ರಪ್ರದೇಶದಾದ್ಯಂತ ನಡೆದ ಈ ಪರೀಕ್ಷೆಗಳಿಗೆ 8500 ಮಂದಿ ಹೆಸರು ನೊಂದಾಯಿಸಿ, ಪರೀಕ್ಷೆಗಳನ್ನು ಎದುರಿಸಿದವರು 6500 ಮಂದಿ. ಇವರಲ್ಲಿ 5500 ಮಂದಿ ತೇರ್ಗಡೆಯಾಗಿದ್ದಾರೆ. ಮೊದಲ ಸ್ಥಾನದಲ್ಲಿ ಪ್ರೊದ್ದುಟೂರಿನ ರಮಣ ಮಹರ್ಷಿ ಪ್ರೌಢಶಾಲೆಯ ಎಂಟನೇ ತರಗತಿಯ ವೀರಶ್ರೀಷ ಬಂದಿದ್ದರೆ (81 ಶತಾಂಶ) ಎರಡನೆಯ ರ್‍ಯಾಂಕು ಜಗಿತ್ಯಾಲದ ಶಾರದಾ ವಿದ್ಯಾ ನಿಕೇತನದಲ್ಲಿನ ಹತ್ತನೇ ತರಗತಿಯ ವಿದ್ಯಾರ್ಥಿ ಯು. ಮಧುಕರ್ (80 ಶತಾಂಶ) ಪಡೆದಿದ್ದು, ಮೂರನೆಯ ರ್‍ಯಾಂಕು ಶ್ರೀಕಾಕುಳಂ ಜಿಲ್ಲೆಯ ಮೈತ್ರಿ ವಿದ್ಯಾನಿಕೇತನದ 9 ನೇ ತರಗತಿಯ ವಿದ್ಯಾರ್ಥಿ ಎ. ಗಣೇಷ್ (79 ಶತಾಂಶ) ಪಡೆದಿರುವರು.

### ತಿರುಮಲೆಯಲ್ಲಿ ಸಚಿನ್ ತೆಂಡೂಲ್ಕರ್

ಖ್ಯಾತ ಕ್ರಿಕೆಟ್ ಕ್ರೀಡಾ ಪಟು ಶ್ರೀ ಸಚಿನ್ ರಮೇಶ್ ತೆಂಡೂಲ್ಕರ್ ತಮ್ಮ ಕುಟುಂಬ ಸಮೇತರಾಗಿ 20 ನೇ ಏಪ್ರಿಲ್ 2001 ರಂದು ತಿರುಮಲೆಗೆ ಆಗಮಿಸಿ ಸ್ವಾಮಿಯ ದರ್ಶನ ಪಡೆದು ತಮ್ಮ ಸಾಧನೆಗಳಿಗೆಲ್ಲ ದೇವರ ಕೃಪೆಯೇ ಕಾರಣವೆಂದು ಕೃತಜ್ಞತೆ ಅರ್ಪಿಸಿದರು.

ಈ ಹಿಂದೆ ಭಾರತೀಯರ ಹೆಮ್ಮೆಯ ಪ್ರತೀಕ ಶ್ರೀಮತಿ ಕರಣಂ ಮಲ್ಲೇಶ್ವರಿ, ಅಂತರರಾಷ್ಟ್ರೀಯ ಛಾಂಪಿಯನ್ ಪುಲ್ಲೆಲ ಗೋಪೀಚಂದ್ ಅವರುಗಳೂ ಸ್ವಾಮಿಯನ್ನು ಕಂಡು ಆರಾಧಿಸಿದ್ದನ್ನು ಇಲ್ಲಿ ನೆನೆಯಬಹುದಾಗಿದೆ.

ಶ್ರೀ ಸಚಿನ್ ತೆಂಡೂಲ್ಕರ್ ಅವರಿಗೆ ಆಲಯದಲ್ಲಿ ಆರತಿಯನ್ನಿತ್ತು ಪ್ರಸಾದಗಳನ್ನು ನೀಡಲಾಯಿತು.

### ಕಾಲುಹಾದಿಯಲ್ಲಿ ಯಾತ್ರಿಕ ಸೌಲಭ್ಯ

ತಿರುಪತಿಯಿಂದ ಅಲಿಪಿರಿಯ ಮೂಲಕವಾಗಿ ಕಾಲುಹಾದಿಯಲ್ಲಿ ಬೆಟ್ಟವನ್ನೇರುವ ಭಕ್ತಜನರ ಅನುಕೂಲಕ್ಕಾಗಿ ಅಲ್ಲಲ್ಲಿ ವಿಶ್ರಾಂತಿ ಧಾಮಗಳನ್ನು ಏರ್ಪಡಿಸಲು ಯೋಜಿಸಲಾಗಿದೆ. ಪತ್ರಿಕಾ ಸಮಾವೇಶದಲ್ಲಿ ಮಾತನಾಡುತ್ತ ತಿ.ತಿ.ದೇ. ಕಾರ್ಯ ನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ ಅವರು ತಿರುಮಲೆಯಲ್ಲಿನ ವಸತಿ ಸೌಲಭ್ಯ, ದಿನೇ ದಿನೇ ಹೆಚ್ಚುತ್ತಿರುವ ಸಂದಣಿಗೆ ಸಾಕಾಗದೆಂದೂ, ಅದಕ್ಕಾಗಿಯೇ ಸಮುದಾಯ ವಿಶ್ರಾಮ ಧಾಮಗಳ (ಡಾರ್ಮಿಟರಿ ಹಾಲ್‌ಗಳ) ಏರ್ಪಾಡುಗಳನ್ನು ಹೆಚ್ಚಿಸಲಾಗುತ್ತಿದೆಯೆಂದೂ, ಬೇಸಿಗೆಯಲ್ಲಿಯೂ ಬ್ರಹ್ಮೋತ್ಸವಗಳಲ್ಲಿಯೂ ತತ್ಕಾಲಿಕವಾದ ಚಪ್ಪರಗಳ ಏರ್ಪಾಡುಗಳು ಎಂದಿನಂತೆ ನಡೆದಿದ್ದರೂ, ಸಂದಣಿಯ ಸೌಲಭ್ಯ ದೃಷ್ಟ್ಯಾ ಬೆಟ್ಟದಲ್ಲಿರುವ ಎಲ್ಲರೀತಿಯ ವಸತಿಗಳನ್ನು ಯಾತ್ರಿಕರಿಗೆ ಅನುವು ಮಾಡುತ್ತಿರುವುದಾಗಿ ನುಡಿದರು. ಈ ದಿಸೆಯಲ್ಲಿ ಯಾತ್ರಿಕರ ಅನುಕೂಲಕ್ಕಾಗಿ ಕಾಲು ಹಾದಿಯಲ್ಲಿ ಮೂರುಕಡೆ ಮೂವತ್ತಾರು ಲಕ್ಷರೂಪಾಯಿಗಳ ವೆಚ್ಚದಲ್ಲಿ ವಿಶ್ರಾಂತಿಧಾಮಗಳನ್ನು ಏರ್ಪಡಿಸುವ ಯೋಚನೆ ಮಾಡಲಾಗುತ್ತಿದೆ - ಎಂದು ಅವರು ತಿಳಿಸಿದರು. ಗಾಳಿಗೋಪುರ, ಆಂಜನೇಯ ಸ್ವಾಮಿ ವಿಗ್ರಹ, ನರಸಿಂಹಸ್ವಾಮಿ ಆಲಯಗಳ ಹತ್ತಿರದಲ್ಲಿ ಈ ವಿಶ್ರಾಂತಿಧಾಮಗಳ ಏರ್ಪಾಡು ಮಾಡುವುದಾಗಿ ಅವರು ತಿಳಿಸಿದ್ದಾರೆ.

### ಸವ್ಯಾಖ್ಯಾನ ಆಂಧ್ರ ಮಹಾಭಾರತ
### ಆದಿ_ಸಭಾಪರ್ವಗಳ ಬಿಡುಗಡೆ

ತಿ. ತಿ. ದೇವಸ್ಥಾನಗಳು ಸಂಕಲ್ಪಿಸಿರುವ ಸವ್ಯಾಖ್ಯಾನ ಆಂಧ್ರ ಮಹಾಭಾರತದ ಸಮಗ್ರ ಸಂಪುಟಗಳ ಬಿಡುಗಡೆಯ ಮೊದಲ ಹಂತದಲ್ಲಿ ಆದಿಪರ್ವ ಸಭಾಪರ್ವಗಳನ್ನು 12-5-5001 ರಂದು ಶನಿವಾರ ತಿರುಪತಿಯ ಮಹತಿ ಸಭಾಂಗಣದಲ್ಲಿ ಬಿಡುಗಡೆ ಮಾಡಲಾಯಿತು.

ಸಂಸ್ಕೃತ ಭಾರತವನ್ನು ಕನ್ನಡದಲ್ಲಿ ಪಂಪಕವಿಯು ವಿಕ್ರಮಾರ್ಜುನ ವಿಜಯವಾಗಿ ಸಂಗ್ರಹಿಸಿದ್ದಾದ ಮೇಲೆ, ರಾಜರಾಜನರೇಂದ್ರನ ಆಸ್ಥಾನದಲ್ಲಿದ್ದ ನನ್ನಯಭಟ್ಟ ತೆಲುಗಿನಲ್ಲಿ ಅನುವಾದ ಮಾಡಲು ತೊಡಗಿದ. ಆದಿ ಸಭಾಪರ್ವಗಳು ಅನುವದಿಸಿದ್ದಾದ ಮೇಲೆ ಅರಣ್ಯಪರ್ವದ ಅನುವಾದಕಾರ್ಯ ನಡೆಯುತ್ತಿದ್ದಾಗ ಆತ ತೀರಿಕೊಂಡ. ನಂತರ ತಿಕ್ಕನಾಮಾತ್ಯ (ನೆಲ್ಲೂರು ಜಿಲ್ಲೆ) ವಿರಾಟಪರ್ವದಿಂದ ಸ್ವರ್ಗಾರೋಹಣದ ವರೆಗೆ ತೆಲುಗಿಗೆ ಅನುವಾದಿಸಿದ. ಅರಣ್ಯಪರ್ವದಲ್ಲಿ ನನ್ನಯ ಬಿಟ್ಟ ಭಾಗವನ್ನು

ಎರ್ರಾಪ್ರಗಡ (ಎರ್ರನ) (ಹರಿವಂಶ, ನರಸಿಂಹಪುರಾಣಗಳನ್ನು ಬರೆದಾತ) ಪೂರ್ಣಗೊಳಿಸಿದ. ಹೀಗಾಗಿ ತೆಲುಗು ಭಾರತ ಕರ್ತೃಗಳು ಮೂವರು. ಅದರ ಹೆಸರು ಕವಿತ್ರಯಭಾರತಮು. ಆಂಧ್ರ ಮಹಾ ಭಾರತಮು ಎಂದರೂ ಅದೇಯೆ. ಪ್ರಶ್ನೆಯೆಂದರೆ 11-13 ನೇ ಶತಮಾನದಿಂದ ಬಹುದೂರ ಸಾಗಿಬಂದಾದ ಮೇಲೆ ಇಂದಿನ ಜನಕ್ಕೆ ಈ ಭಾರತದ ಸಾರ ಸುಲಭವಾಗಿ ಸಿಗಬೇಕೆಂದರೆ ಸ್ವಲ್ಪ ವ್ಯಾಖ್ಯಾನ ಪ್ರತಿಪದಾರ್ಥ ಅಗತ್ಯ. ತಿ. ತಿ. ದೇವಸ್ಥಾನಗಳ ಪ್ರಕಟನ ವಿಭಾಗದಲ್ಲಿ ಇದಕ್ಕಾಗಿ ಸಂಪಾದಕ ಎನ್. ಎಸ್. ರಾಮಮೂರ್ತಿಯವರ ಸಂಚಾಲಕತ್ವದಲ್ಲಿ ಒಂದು ಸಂಪಾದಕೀಯ ಮಂಡಲಿಯನ್ನು ಏರ್ಪಡಿಸಿ ಆಂಧ್ರಪ್ರದೇಶದ ಹೆಸರಾಂತ ಪಂಡಿತಮನ್ಯರ ಮೂಲಕ ವ್ಯಾಖ್ಯಾನಗಳನ್ನು ಬರೆಯಿಸಿದ್ದಾದ ಮೇಲೆ ಈ ಎಲ್ಲ ವ್ಯಾಖ್ಯಾನದಲ್ಲಿಯೂ ಏಕರೂಪತೆಯನ್ನು ಸಾಧಿಸಲು ಆಚಾರ್ಯ ಜಿ. ವಿ. ಸುಬ್ರಹ್ಮಣ್ಯಂ ಅವರಿಗೆ ಪ್ರಧಾನ ಸಂಪಾದಕತ್ವ ಜವಾಬ್ದಾರಿ ನೀಡಲಾಯಿತು. ಆ ಬೃಹತ್ ಪ್ರಣಾಳಿಕೆಯಲ್ಲಿ ಇದೀಗ -

ಆದಿಪರ್ವ : ವ್ಯಾಖ್ಯಾತೃ - ದಿ|| ಆಚಾರ್ಯ ದಿವಾಕರ್ಲ ವೆಂಕಟಾವಧಾನಿ. (ಭಾಗ - 1).

ಆದಿಪರ್ವ : ವ್ಯಾಖ್ಯಾತೃ - ಆಚಾರ್ಯ ಅಪ್ಪಜೋಡು ವೆಂಕಟಸುಬ್ಬಯ್ಯ (ಭಾಗ - 2).

ಸಭಾಪರ್ವ : ವ್ಯಾಖ್ಯಾತೃ - ಆಚಾರ್ಯ ಅಪ್ಪಜೋಡು ವೆಂಕಟಸುಬ್ಬಯ್ಯ

- ಗಳನ್ನು 12-5-2001 ರಂದು ಬಿಡುಗಡೆ ಮಾಡಲಾಯಿತು. ಮುಂದಿನ ಅರಣ್ಯಪರ್ವ (ವ್ಯಾಖ್ಯಾನ - ಆಚಾರ್ಯ ನಂಡೂರಿ ರಾಮಕೃಷ್ಣಮಾಚಾರ್ಯ) ಭಾಗ ಮುದ್ರಣಕ್ಕೆ ಸಿದ್ಧವಾಗಿದೆ. ತಿಕ್ಕನ ಭಾರತದ ಎಲ್ಲ ಭಾಗಗಳೂ ವ್ಯಾಖ್ಯಾನ ಸಹಿತಸಿದ್ಧವಿದ್ದು ಪ್ರಧಾನ ಸಂಪಾದಕರ ಮೇಜಿನಲ್ಲಿದೆ.

12-5-2001 ಶನಿವಾರ ತಿರುಪತಿಯ ಮಹತಿ ಸಭಾಂಗಣದಲ್ಲಿ ತಿ. ತಿ. ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ ಅವರ ಅಧ್ಯಕ್ಷತೆಯಲ್ಲಿ ಆಂಧ್ರಪ್ರದೇಶದ ಮುಜರಾಯಿ ಇಲಾಖಾಮಂತ್ರಿ ಶ್ರೀ ದಂಡು ಶಿವರಾಮರಾಜು ಅವರು ಆದಿಸಭಾಪರ್ವಗಳ ಮೂರು ಸಂಪುಟಗಳನ್ನು ಬಿಡುಗಡೆ ಮಾಡಿದರು. ಆಂಧ್ರಪ್ರದೇಶದ ಸಮಾಚಾರ ಶಾಖಾಮಂತ್ರಿ ಡಾ|| ಎನ್. ಶಿವಪ್ರಸಾದ್ ಅವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಶಾಸನಸಭೆಯ ತಿರುಪತಿಯ ಪ್ರತಿನಿಧಿ ಚದಲವಾಡ ಕೃಷ್ಣಮೂರ್ತಿಯವರು ವಿಶೇಷ ಆಹ್ವಾನಿತರಾಗಿದ್ದರು.

ಪುಸ್ತಕಗಳನ್ನು ಬಿಡುಗಡೆ ಮಾಡಿದ ಶ್ರೀ ದಂಡು ಶಿವರಾಮರಾಜು ಅವರು ವ್ಯಾಖ್ಯಾನಸಹಿತವಾದ ಆಂಧ್ರಭಾರತವನ್ನು ಪ್ರಕಟಿಸುವ ಘನ ಉದ್ದೇಶ ತಿ. ತಿ. ದೇ. ಗಳಿಗೆ ಉಂಟಾಗಿದ್ದು ಅತ್ಯಂತ ಶ್ಲಾಘನೀಯವೆಂದೂ, ಈ ಯೋಜನೆಯ ಎಲ್ಲ ಪುಸ್ತಕಗಳೂ ಅತಿತ್ವರೆಯಾಗಿ ಹೊರಬರಲಿ ಎಂದೂ ಹಾರೈಸಿದರು. ಗೌರವ ಅತಿಥಿಗಳಾಗಿ ಭಾಗವಹಿಸಿದ ಶ್ರೀ ಚದಲವಾಡ ಕೃಷ್ಣಮೂರ್ತಿ ಅವರು ಕವಿತ್ರಯ ಭಾರತ ಆಂಧ್ರದೇಶಕ್ಕೆ ಸಂದ ಅತ್ಯುತ್ತಮ ವಾರಸಿಕೆಯೆಂದೂ ಇದನ್ನು ಮನೆ ಮನೆಯಲ್ಲಿಯೂ ಇಟ್ಟುಕೊಂಡು ನಿತ್ಯ ಪಾರಾಯಣ ಮಾಡುವಂತಾಗಬೇಕೆಂದೂ ಹಾರೈಸಿದರು. ಮುಖ್ಯ ಅತಿಥಿಗಳಾಗಿ ಭಾಗವಹಿಸಿದ ಡಾ|| ಎನ್. ಶಿವಪ್ರಸಾದ್ ಅವರು ಮಾತನಾಡುತ್ತ ಸಂಸ್ಕೃತ ವ್ಯಾಸಭಾರತದ ಇಡೀ ಧರ್ಮಸಾರಾಂಶವು ತೆಲುಗಿಗೆ ಅನುವಾದವಾಗಿರುವುದರಿಂದ ಇಲ್ಲಿ ರಾಜ ಧರ್ಮ, ಪ್ರಜಾಧರ್ಮ, ಪಿತೃ, ಪುತ್ರ, ಮಿತ್ರ ಧರ್ಮಗಳನ್ನೆಲ್ಲ ಸವಿವರವಾಗಿ ಚಿತ್ರಿಸಲಾಗಿದೆ- ಎಂದೂ ಇಂತಹ ಧರ್ಮ ವಿವರದ ಇತಿಹಾಸ ಕಾವ್ಯವನ್ನು ವಿಶೇಷಾಂಶಗಳೊಂದಿಗೆ ವ್ಯಾಖ್ಯಾನ ಮಾಡಿದ ಪುಸ್ತಕ ಪ್ರಕಟನೆಯಿಂದಾಗಿ ಭಾರತವನ್ನು ಭಾರತೀಯರಿಗೆ ಮತ್ತೂ ಹತ್ತಿರಕ್ಕೆ ತಂದಂತೆ ಆಗಿದೆಯೆಂದು ನುಡಿದರು.

ಗ್ರಂಥ ಪ್ರಶಸ್ತಿಯ ಬಗ್ಗೆ ಮಾತನಾಡುತ್ತ ಆಂಧ್ರ ಮಹಾಭಾರತದ ಪ್ರಧಾನ ಸಂಪಾದಕ ಆಚಾರ್ಯ ಜಿ. ವಿ. ಕೃಷ್ಣಮೂರ್ತಿಯವರು ವ್ಯಾಸಭಾರತ ಕವಿತ್ರಯ ಭಾರತ - ಇತರ ದಕ್ಷಿಣ ಭಾರತದ ಭಾರತಗಳು - ಭಾರತಗಳಿಗೆ ಬರೆಯಲಾದ ವ್ಯಾಖ್ಯಾನ, ವಿವರಣೆಗಳು - ಪ್ರಸ್ತುತ ಸವ್ಯಾಖ್ಯಾನ ಆಂಧ್ರ ಮಹಾಭಾರತದ ವೈಶಿಷ್ಟ್ಯ - ಇಲ್ಲಿನ ಇತಿಹಾಸ - ಧರ್ಮ - ಕಾವ್ಯ ಸಮ್ಮೇಳನಗಳನ್ನು, ಪ್ರಭುಸಮ್ಮಿತ, ಮಿತ್ರಸಮ್ಮಿತ ಕಾಂತಾಸಮ್ಮಿತಗಳ ಸುಂದರ ಸಮಾಸ ವಾಗಿರುವಿಕೆಯನ್ನು ವಿವರಿಸಿದರು.

ಒಟ್ಟು ಹದಿನೈದು ಸಂಪುಟಗಳಾಗಬಹುದಾದ ಸವ್ಯಾಖ್ಯಾನ ಆಂಧ್ರಭಾರತವನ್ನು ಸಂಪೂರ್ಣ ವಾಗಿ ಒಂದೆರಡು ವರ್ಷಗಳಲ್ಲಿ ಹೊರತರುವುದಾಗಿ ಅಧ್ಯಕ್ಷಸ್ಥಾನದಿಂದ ಡಾ|| ಪಿ. ಕೃಷ್ಣಯ್ಯನವರು ತಿಳಿಸಿದರು.

ಡಾ|| ಮೇಡಸಾನಿ ಮೋಹನ್ ಅವರು ಸ್ವಾಗತಿಸಿದ ಸಭೆಯಲ್ಲಿ ಡಾ|| ಕೆ. ಜೆ. ಕೃಷ್ಣಮೂರ್ತಿಯವರು ಆಂಧ್ರ ಮಹಾಭಾರತದ ಪ್ರಕಟನೆಯ ಪೂರ್ವೋತ್ತರಗಳ ನಿವೇದಿಕೆಯನ್ನು ಸಮರ್ಪಿಸಿದರು. ತಿ.ತಿ.ದೇ. ಪೌರ ಸಂಬಂಧಾಧಿಕಾರಿ ಶ್ರೀ ಎ. ಸುಭಾಷ್ ಗೌಡ್ ಅವರು ವಂದನೆ ಸಲ್ಲಿಸಿದರು.

ತದಂಗವಾಗಿ ಅಂದು ಸಂಜೆ ಮಹತಿ ಸಭಾಂಗಣದಲ್ಲಿ ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದರು ಅನ್ನಮಾಚಾರ್ಯರ ಮಹಾಭಾರತ ಕೀರ್ತನೆಗಳನ್ನು ಹಾಡಿದರು. ಪುಸ್ತಕ ಬಿಡುಗಡೆಯಾದ ಮೇಲೆ ಹೈದರಾಬಾದಿನ ಸುರಭಿ ನಾಟಕ ಮಂಡಳಿಯವರು ಮಾಯಾಬಜಾರ್ ನಾಟಕವನ್ನು ಸಾದರ ಪಡಿಸಿದರು.

### ಭಗವದ್ರಾಮಾನುಜರ ಅವತಾರೋತ್ಸವ

ತಿರುಪತಿಯಲ್ಲಿನ ಮಹತಿ ಸಭಾಂಗಣದಲ್ಲಿ ದಿನಾಂಕ 28-4-2001 ರಿಂದ ಭಗವ ದ್ರಾಮಾನುಜರ ಅವತಾರೋತ್ಸವವನ್ನು ತಿ.ತಿ.ದೇ. ಆಳ್ವಾರ್ ದಿವ್ಯಪ್ರಬಂಧ ಪ್ರಾಜೆಕ್ಟ್ ವತಿಯಿಂದ ಗಂಭೀರವಾಗಿ ಉತ್ಸಾಹದಿಂದ ಆಚರಿಸಲಾಯಿತು.

ಒಂದು ವಾರ ಕಾಲ ಪ್ರತಿದಿನ ಸಂಜೆ ನಡೆದ ಈ ಅವತಾರೋತ್ಸವ ಕಾರ್ಯಕ್ರಮದಲ್ಲಿ ನಾಡಿನ

ಖ್ಯಾತ ವಿದ್ವಾಂಸರು ರಾಮಾನುಜರ ಜೀವನ ಸಾಧನೆಗಳನ್ನು - ಸಾಹಿತ್ಯ, ಸ್ತೋತ್ರಗಳನ್ನು, ಸವಿವರವಾಗಿ ಶ್ರೋತೃಗಳ ಮುಂದೆ ತೆರೆದಿಡುವಲ್ಲಿಯಶಸ್ವಿಯಾದರು. ಸರ್ವಶ್ರೀ ವಿ. ವೈ. ವಿ. ಸೋಮಯಾಜುಲು, ವಿ. ನರಸಿಂಹನ್, ಶೇಷಾದ್ರಿ ಅಯ್ಯಂಗಾರ್, ಡಾ|| ಪ್ರೇಮಾನಂದ ಕುಮಾರ್, ಸತ್ಯಾರಾಂ, ಜಿ. ಎಲ್. ಎಲ್. ಮೂರ್ತಿ, ಟಿ.ವಿ. ರಾಘವಾಚಾರ್ಯುಲು, ಎ. ರಂಗಾಚಾರ್ಯ, ಡಾ|| ಎಂ. ವರದರಾಜನ್, ಡಾ|| ಟಿ.ಪಿ. ರಾಮಚಂದ್ರಾಚಾರ್ಯ, ಡಾ|| ವಿ. ರಾಜಗೋಪಾಲಚಕ್ರವರ್ತಿ, ಡಾ|| ಕೆ. ಜೆ. ಕೃಷ್ಣಮೂರ್ತಿ, ಡಾ|| ಸಿಂಗರಾಚಾರ್ಯುಲು, ಡಾ|| ಪಿ. ಉಮ - ಮುಂತಾದವರ ವಿದ್ವತ್ಪೂರ್ಣ ಉಪನ್ಯಾಸಗಳಲ್ಲಿ, ಹಲವು ಮಂದಿ ಸಂಗೀತ ವಿದ್ವಾಂಸರ ಸಂಕೀರ್ತನ ಸೇವೆಯಲ್ಲಿ ಹಲವು ಭಾಗವತ ಶ್ರೇಷ್ಠರ ಹರಿಕಥೆಗಳಲ್ಲಿ ರಾಮಾನುಜರ ಭಕ್ತಿ ಪ್ರಪತ್ತಿಗಳನ್ನು ವಿವರಗಳನ್ನು ತಿಳಿಯಲಾಯಿತು. ಸರ್ವಶ್ರೀ ಸಮುದ್ರಾಲ ಲಕ್ಷ್ಮಣಯ್ಯ, ಸಿ. ಸಚ್ಚಿದಾನಂದಂ - ಮೊದಲಾದ ಹಿರಿಯರು ಅಧ್ಯಕ್ಷರುಗಳಾಗಿ ದಿನವೂ ಕಾರ್ಯಕ್ರಮಗಳನ್ನುನಡೆಸಿಕೊಟ್ಟರು.

### ಅನ್ನಮಾಚಾರ್ಯ ಜಯಂತಿ

ತಾಳ್ಳಪಾಕ ಅನ್ನಮಾಚಾರ್ಯರ 593 ನೇ ಜಯಂತಿ ಮಹೋತ್ಸವಗಳು 8-5-2001 ರಿಂದ 10-5-2001 ರವರೆಗೆ ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರ ಹಾಗೂ ಮಹತಿ ಸಭಾಂಗಣದಲ್ಲಿ ಯಶಸ್ವಿಯಾಗಿ ನಡೆದವು.

8-5-2001 ರಂದು ಬೆಳಗ್ಗೆ ತಿ.ತಿ.ದೇ. ಪರಿಪಾಲನಾಭವನದಿಂದ ಅನ್ನಮಾಚಾರ್ಯರ ವಿಗ್ರಹವನ್ನು ಮೆರವಣಿಗೆಯಲ್ಲಿ ಊರ ಪ್ರದಕ್ಷಿಣೆ ಮಾಡುತ್ತ ಅನ್ನಮಾಚಾರ್ಯ ಕಲಾಮಂದಿರಕ್ಕೆ ತಂದು ಅನ್ನಮಯ್ಯ ಆಸ್ಥಾನವನ್ನು ನಿರ್ವಹಿಸಲಾಯಿತು. ತಿ.ತಿ.ದೇ. ಕಾರ್ಯ ನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯನವರು ಜಯಂತಿಯನ್ನು ಉದ್ಘಾಟಿಸಿದರು. ಸಭೆಯಲ್ಲಿ ವಿಶ್ರಾಂತ ಐ.ಎ.ಎಸ್. ಅಧಿಕಾರಿ ಶ್ರೀ ಕೆ. ರಾಮಿರೆಡ್ಡಿ ಅತಿಥಿಗಳಾಗಿದ್ದರು. ಡಾ|| ಮುಟ್ನೂರಿ ಸಂಗಮೇಶಂ ಮುಖ್ಯ ಅತಿಥಿಗಳಾಗಿದ್ದು, ಕಲಾವಿದರು ಗೋಷ್ಠಿ ಗಾನವನ್ನು ಸಮರ್ಪಿಸಿದರು. 9-5-2001 ರಂದು ಬೆಳಗ್ಗೆ ಆಚಾರ್ಯ ಡಾ|| ಟಿ. ನಿರ್ಮಲ ಅವರ ಅಧ್ಯಕ್ಷತೆಯಲ್ಲಿ ಹಲವು ವಿದ್ವಾಂಸರು ಮಾತನಾಡಿದರು. 10-5-2001 ರಂದು ಶ್ರೀ ಉದಯಗಿರಿ ಶ್ರೀನಿವಾಸಾಚಾರ್ಯರ ಅಧ್ಯಕ್ಷತೆಯಲ್ಲಿ ಪರಿಶೋಧನಾ ಪತ್ರಗಳನ್ನು ಪಠಿಸಿ ಅನ್ನಮಯ್ಯನ ಸಾಹಿತ್ಯ, ಭಕ್ತಿ, ಕಲೆ, ಪ್ರಪತ್ತಿಗಳ ಬಗೆ ವಿಚಾರಗಳನ್ನು ಸಾದರ ಪಡಿಸಲಾಯಿತು.

8-5-2001 ರಿಂದ 10-5-2001 ವರೆಗೆ ದಿನವೂ ಸಂಜೆ ಮಹತಿ ಸಭಾಂಗಣದಲ್ಲಿ ಸಂಗೀತ ಸಭೆಗಳು ನಡೆದವು. ನಾಡಿನ ಖ್ಯಾತ ಸಂಗೀತ ವಿದ್ವಾಂಸರು ವಿದ್ವದ್ರಸಿಕರನ್ನು ಅನ್ನಮಾಚಾರ್ಯ ಗಾಯನ ಪ್ರಪಂಚದಲ್ಲಿ ವಿಹಾರ ಯಾತ್ರೆ ಮಾಡಿಸಿದರು.



ಯಾತ್ರಿಕ ಭಕ್ತರಲ್ಲಿ.....

## ವಿನಂತಿ

**"ಡಯಲ್ - ಯುವರ್ ಇ.ಓ."**



ತಿರುಮಲೆಯಲ್ಲಿ ತಮ್ಮ ಅನುಭವಕ್ಕೆ ಬಂದ ಕುಂದು ಕೊರತೆಗಳ ಬಗ್ಗೆ ಹೆಚ್ಚು - ಕಡಿಮೆಗಳ ಬಗ್ಗೆ - ಸಲಹೆ ಸೂಚನೆಗಳನ್ನು ಕಾರ್ಯನಿರ್ವಹಣಾಧಿಕಾರಿಯವರಿಗೆ ನೇರವಾಗಿ ನೀಡಬಹುದು. ಅದಕ್ಕಾಗಿ ಪ್ರತಿ ಶುಕ್ರವಾರ ಬೆಳಗ್ಗೆ 8-30 ರಿಂದ 9-00 ಗಂಟೆಯವರೆಗೆ ತಾವು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳೊಡನೆ ದೂರವಾಣಿಯಲ್ಲಿ ಮಾತನಾಡಬಹುದು.

*ದೂರವಾಣಿ ಸಂಖ್ಯೆ - 08574-77261.*

ಯಾತ್ರಿಕರ ಸೌಕರ್ಯಗಳನ್ನು ಹೆಚ್ಚಿಸಲು
ತಮ್ಮ ಸುಲಭತರ ಯಾತ್ರೆ ಕೈಗೂಡಲು
ದಯವಿಟ್ಟು ಮಾತನಾಡಿ.

### ನೂತನ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ



ಮಹಬೂಬ್ ನಗರಜಿಲ್ಲೆಯಲ್ಲಿನ ಕೊಡಂಗಲ್‌ನಲ್ಲಿ ಹುಟ್ಟಿ ಬೆಳೆದವರಾದ ಶ್ರೀ ಕೆ. ನಾರಾಯಣ ಐ. ಎ. ಎಸ್. ಅವರನ್ನು ಆಂಧ್ರ ಪ್ರದೇಶ ಸರ್ಕಾರ ತಿ. ತಿ. ದೇವಸ್ಥಾನಗಳ ಸಂಯುಕ್ತ ಕಾರ್ಯ ನಿರ್ವಹಣಾಧಿಕಾರಿ ಹುದ್ದೆಗೆ ನಿಯಮಿಸಿದ್ದು ಶ್ರೀಯುತರು 25-5-2001 ರಂದು ಶುಕ್ರವಾರ ತಮ್ಮ ಪದವಿಯನ್ನು ಸ್ವೀಕರಿಸಿದ್ದಾರೆ.

ತಿ.ತಿ. ದೇವಸ್ಥಾನಗಳಲ್ಲಿ ಕೆಲಸ ಮಾಡುವುದು ತಮ್ಮ ಭಾಗ್ಯವೆಂದು ತಿಳಿಸಿದ ಶ್ರೀಯುತರು ಸಿಬ್ಬಂದಿಯ ಸಹಕಾರದಿಂದ ಸೇವಾಕಾರ್ಯ ದಲ್ಲಿ ಶಿಸ್ತು ಮೂಡಿಸುವುದು ತಮ್ಮ ಆದರ್ಶ ಗುರಿಗಳಲ್ಲಿ ಪ್ರಮುಖ ಅಂಶವೆಂದು ನುಡಿದು ಅದಕ್ಕಾಗಿ ಉದ್ಯೋಗಿಗಳ ಸಂಪೂರ್ಣ ಬೆಂಬಲವನ್ನು ಅಪೇಕ್ಷಿಸಿದರು.

### ತಿ. ತಿ. ದೇವಸ್ಥಾನಗಳ ವಿದ್ಯಾಶಾಖಾಧಿಕಾರಿ

ಡಾ|| ಜೆ. ಸುಬ್ರಹ್ಮಣ್ಯಂ ಅವರನ್ನು



ತಿ.ತಿ. ದೇವಸ್ಥಾನಗಳ ವಿದ್ಯಾಶಾಖಾಧಿಕಾರಿ ಯಾಗಿ ಆಯ್ಕೆ ಮಾಡ ಲಾಗಿದ್ದು ಅವರು 25-5-2001 ರಂದು ಶುಕ್ರವಾರ ತಮ್ಮ ಪದವಿಯ ಹೊಣೆ ಯನ್ನು ಸ್ವೀಕರಿಸಿದ್ದಾರೆ.

ಇಪ್ಪತ್ತೆರಡು ವರ್ಷ ಕಾಲ ತಿರುಪತಿಯ ಎಸ್.ಜಿ.ಎಸ್. ಕಾಲೇಜಿನಲ್ಲಿ ವಾಣಿಜ್ಯ ವಿಭಾಗದ ಮುಖ್ಯಸ್ಥರಾಗಿ ಕೆಲಸಮಾಡಿದ ಡಾ|| ಬಾಲಸುಬ್ರಹ್ಮಣ್ಯಂ ಹೋದ ವರ್ಷ ಎಸ್.ವಿ.ಎಸ್. ಕಾಲೇಜಿನ ಪ್ರಾಂಶುಪಾಲ ರಾಗಿದ್ದು, ಈಚೆಗೆ ತಿ.ತಿ. ದೇವಸ್ಥಾನಗಳಲ್ಲಿರುವ 29 ಶಿಕ್ಷಣ ಶಾಲೆಗಳ ಹಿರಿಯ ಶಾಖೆಯ ಮುಖ್ಯಸ್ಥರಾಗಿದ್ದಾರೆ.



### ತಿರುಮಲೆಯಲ್ಲಿ ಪೋಟು ವಿಸ್ತರಣೆ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿ ಲಾಡು ಮಾಡುವ ಅಡುಗೆಯ ಶಾಲೆ (ಪೋಟು) ಯನ್ನು ವಿಸ್ತಾರ ಗೊಳಿಸಲಾಗಿದೆ. ಮೊದಲಿನದರಷ್ಟೇ ವಿಸ್ತಾರದ ಈ ಎರಡನೇ ಪೋಟುವನ್ನು ಆಂಧ್ರಪ್ರದೇಶದ ಮುಜರಾಯಿ ಇಲಾಖಾಮಂತ್ರಿ ಶ್ರೀ ದಂಡು ಶಿವರಾಮರಾಜು ಅವರು ಈಚೆಗೆ ಉದ್ಘಾಟಿಸಿದರು.

ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ ಅವರು ಭಾಗವಹಿಸಿದ್ದ ಈ ಆರಂಭ ಸಭೆಯಲ್ಲಿ ಮಂತ್ರಿವರ್ಯರು ಮಾತನಾಡುತ್ತ ಕೆಲಸಗಾರರು ಸೇವಾಭಾವದಿಂದ ಕೆಲಸವನ್ನು ಮಾಡುತ್ತ ಯಾತ್ರಿಕರ ಅನುಕೂಲಗಳನ್ನು ಗಮನಿಸುತ್ತಲೇ ನಡೆದಲ್ಲಿ ಲಾಡುವಿನ ಕೊರತೆ ಕಂಡು ಬರುವುದಿಲ್ಲ ಎಂದು ನುಡಿದರು.

ಶ್ರೀ ದಂಡು ಶಿವರಾಮರಾಜು ಅವರನ್ನು ಪೋಟು ವಿಸ್ತರಣಾನಂತರ ಸ್ವಾಮಿ ಸಂದರ್ಶನಕ್ಕೆ ಕರೆದೊಯ್ಯಲಾಯಿತು. ಸ್ವಾಮಿಯ ಪ್ರಸಾದಗಳನ್ನು ರಂಗನಾಯಕ ಮಂಟಪದಲ್ಲಿ ಶ್ರೀಯುತರಿಗೆ ನೀಡಲಾಯಿತು. ತತ್ಸಂದರ್ಭ ದಲ್ಲಿ ಕಾರ್ಯನಿರ್ವಹಣಾಧಿಕಾರಿ, ಸಂಯುಕ್ತ ಕಾರ್ಯನಿರ್ವಹಣಾಧಿಕಾರಿಗಳು, ಆಲಯ ಡಿಪ್ಯೂಟಿ ಇ. ಓ. ಶ್ರೀ ನಾಗೇಶ್ವರರಾವ್ ಮೊದಲಾದವರು ಹಾಜರಿದ್ದರು. ಅದೇ ದಿನದಿಂದಲೇ ಯಾತ್ರಿಕರು ಬಯಸಿದಷ್ಟು ಲಾಡು ವಿತರಣೆ ಮಾಡಲು ಏರ್ಪಾಡುಗಳನ್ನು ಕೈಗೊಳ್ಳಲಾಯಿತು.

★★★★★



## ತಿರುಮಲೆ ತಿರುಪತಿ ದೇವಸ್ಥಾನಗಳು - ತಿರುಪತಿ.

# ಸಪ್ತಗಿರಿ

## ಏಜಂಟರು ಬೇಕಾಗಿದ್ದಾರೆ

ತಿರುಮಲ ತಿರುಪತಿ ದೇವಸ್ಥಾನಗಳ ವತಿಯಿಂದ ಪ್ರಕಟವಾಗುತ್ತಿರುವ ಮಾಸಪತ್ರಿಕೆ ಸಪ್ತಗಿರಿಯ ವಿತರಣೆಗಾಗಿ ಏಜಂಟರಿಲ್ಲದ ಕಡೆ ಏಜಂಟರು ಬೇಕಾಗಿದ್ದಾರೆ. ಸನಾತನ ಧರ್ಮದ ಸಂಸ್ಕೃತಿ, ಹಾಗೂ ಆಲಯಕ್ಕೆ ಸಂಬಂಧಿಸಿದ ಆಕರ್ಷಕವಾದ ಉತ್ತಮವಾದ ಉತ್ಕೃಷ್ಟ ವಿವರಣೆಯುಳ್ಳ ಲೇಖನಗಳಿಂದಲೂ, ಪ್ರಸಿದ್ಧವಿದ್ವಾಂಸರ ವ್ಯಾಖ್ಯಾನಗಳಿಂದಲೂ ಕೂಡಿದ್ದು ಐದು ಭಾಷೆಗಳಲ್ಲಿ - ಕನ್ನಡ, ಹಿಂದಿ, ತೆಲುಗು, ತಮಿಳು, ಆಂಗ್ಲ ಭಾಷೆಗಳಲ್ಲಿ - ಪ್ರಕಟವಾಗುತ್ತಿರುವ ಸಪ್ತಗಿರಿಯ ಪ್ರಸಾರ ಪ್ರಚಾರಗಳಿಗಾಗಿ ದೇಶಾದ್ಯಂತ ಉತ್ಸಾಹೀ ಏಜಂಟರು ಬೇಕಾಗಿದ್ದಾರೆ. ನಿಯುಕ್ತರಾದ ಏಜಂಟರಿಗೆ ನಿಯಮಾನುಸಾರ ಆಕರ್ಷಕ ಕಮೀಷನ್ ಉಂಟು.

ವಿವರಗಳಿಗಾಗಿ ದಯವಿಟ್ಟು ಕೂಡಲೇ ಬರೆಯಿರಿ.

**ಸಂಪಾದಕರು/ಸಪ್ತಗಿರಿ/ತಿ.ತಿ.ದೇ. ಪ್ರೆಸ್, ಕಾಂಪೌಂಡ್/ ತಿರುಪತಿ - 517 507.**

**ಕಾರ್ಯನಿರ್ವಹಣಾಧಿಕಾರಿ.**

## ಫಲಿಮಾರು ವೃಂದಾವನ ಶೋಭಾಯಾತ್ರೆ

ವೃಷನಾಮಸಂವತ್ಸರ ವೈಶಾಖ ಶುದ್ಧದಶಮಿ ಏಕಾದಶೀ ದ್ವಾದಶಿಗಳಲ್ಲಿ ಫಲಿಮಾರು ಭಂಡಾರಕೇರಿ ಮಠಗಳ ಶ್ರೀ ಶ್ರೀ ವಿದ್ಯಾಮಾನ್ಯತೀರ್ಥರ ವೃಂದಾವನ ಸಿದ್ಧವಾಗಿ, ಭವ್ಯ ಆಲಯ ನೆಲೆಗೊಂಡು, ಘಟಿಕಾಚಲ ಹನುಮಂತ, ರಾಮಚಂದ್ರ ದೇವರುಗಳ ಪೂಜೆಗಳು ನಡೆದು ವೃಂದಾವನ ಶೋಭಾಯಾತ್ರೆ ಯಶಸ್ವಿಯಾಯಿತು. ವಿದ್ಯಾವಿದ್ಯೋತ ಭಾಸ್ವರಂ - ಎಂದೇ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದರಿಂದ ಕೀರ್ತಿತರಾದ ವಿದ್ಯಾಮಾನ್ಯ ಗುರುಗಳನ್ನು ವಂದಿಸುವ ಕಾರ್ಯಕ್ರಮ ಮೂರು ದಿನಗಳೂ ತಿರುಪತಿಯ ದಾಸಸಾಹಿತ್ಯ ಪ್ರಾಜೆಕ್ಟ್, ಶ್ರೀ ವಿದ್ಯಾಧೀಶ ತೀರ್ಥರು ಮತ್ತು ಅಸಂಖ್ಯಾತ ಭಕ್ತ ಭಜನ ಮಂಡಳಿಗಳ ಸಹಕಾರ ಭಕ್ತಿಗೌರವಾದರಗಳಿಂದ ಸಂಪನ್ನವಾಯಿತು.

ತತ್ಸಂದರ್ಭದಲ್ಲಿ ನಡೆಸಿದ 'ಹರಿದಾಸ ಸಾಹಿತ್ಯ ಸಿರಿಪತಿ' ಕ್ವಿಜ್ ಕಾರ್ಯಕ್ರಮ ಯಶಸ್ವಿಯಾಗಿ ಲಕ್ಷ್ಮೀಕಾಂತ ಸಂಘದವರಿಗೆ ಪ್ರಥಮ ಬಹುಮಾನವೂ ಜೆ.ಪಿ. ನಗರದ ಪರಿಮಳ ಸಂಘದವರಿಗೆ ಎರಡನೆ ಬಹುಮಾನವೂ ಬಂದವು. ಪ್ರತಿದಿನವೂ ಹೋಮ ಹವನಗಳ ಪೂಜೆ ಪುರಸ್ಕಾರಗಳ ನಡುವೆ ಅರ್ಧರ್ಧ ಗಂಟೆ ಒಂದೊಂದು ಭಜನ ಮಂಡಳಿಯವರಿಗೆ ಹಾಡುವ ಅವಕಾಶ ದೊರೆಯಿತು. ಏಕಾದಶೀ ಅಖಂಡ ಭಜನೆಯ ನಂತರ ದ್ವಾದಶಿ ಪೂಜೆಯಾಗಿ ಗುರುಗಳ ಭಾವಚಿತ್ರ, ಶ್ರೀನಿವಾಸ ಪದ್ಮಾವತಿಯರ ವಿಗ್ರಹಗಳನ್ನು ರಥದಲ್ಲಿರಿಸಿ ದೊಡ್ಡ ಮೆರವಣಿಗೆ ಶೋಭಾಯಾತ್ರೆ ನಡೆಯಿತು. ಕಿರಿಯ ಸ್ವಾಮಿಜೀಗಳು ಶ್ರೀ ಶ್ರೀ ವಿದ್ಯಾಧೀಶ ತೀರ್ಥರು ತಿರುಪತಿಯ ಸ್ವಾಮಿಯ ಶೇಷವಸ್ತ್ರವನ್ನು ಹೊದ್ದು, ತಲೆಯಲ್ಲಿ ಧರ್ಮಕೇತನ (ವಸ್ತ್ರ) ಧರಿಸಿ ಗುರುಗಳಿಗೆ (ಭಾವಚಿತ್ರಕ್ಕೆ) ಶ್ರೀ ವೆಂಕಟೇಶ್ವರಸ್ವಾಮಿಯ ಶೇಷವಸ್ತ್ರ ಪುರಸ್ಕಾರ ಮಾಡಿದರು. ಅಂದು ರಾತ್ರಿ ಅಮೃತಮಂಥನ ನಾಟಕ ನಡೆಯಿತು. ಮಕ್ಕಳ ನೃತ್ಯ ಪ್ರಯೋಗ "ಶ್ರೀನಿವಾಸಕಲ್ಯಾಣ" ಮೆಚ್ಚುಗೆಗೆ ಪಾತ್ರವಾಯಿತು. ಅಮೃತ, ಮಹಾಪ್ರಸ್ಥಾನ, ಮಂತ್ರಾಲಯ ಬೃಂದಾವನ ಮೊದಲಾದ ಪುಸ್ತಕಗಳು ಬಿಡುಗಡೆಯಾದವು.

**ಚಿತ್ರ - ವರದಿ - ಎಚ್. ಕೆ. ಸಾವಿತ್ರಮ್ಮ.**

Edited and Published on behalf of T. T. Devasthanams by Dr. N. S. Rama Murthy, and printed at T.T.D. Press by I. Parvateeswara Rao, Manager, T. T. D. Press, Tirupati - 517 507.

# ತಿರುಮಲೆಯಲ್ಲಿ

## ಮಾಡಬೇಕಾದವು ಹಾಗೂ ಮಾಡಬಾರದವುಗಳು

### ಮಾಡಬೇಕಾದವು :

★ ತಿರುಮಲೆಗೆ ಬರುವ ಮುನ್ನ ನಿಮ್ಮ ಇಷ್ಟ ಅಥವಾ ಕುಲದೈವವನ್ನು ಪೂಜಿಸಿರಿ.

★ ನಿಮ್ಮ ಪ್ರಯಾಣದ ಟಿಕೆಟ್‌ಗಳನ್ನು, ತಿರುಮಲೆಯಲ್ಲಿ ನಿಮ್ಮ ವಸತಿಯನ್ನು ಮೊದಲೇ ಕಾಯ್ದಿರಿಸಿ.

★ ಶ್ರೀ ವೆಂಕಟೇಶ್ವರಸ್ವಾಮಿಯನ್ನು ದರ್ಶಿಸುವ ಮೊದಲು ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡಿ,
ಅಲ್ಲಿಯೇ ಇರುವ ಶ್ರೀ ವರಾಹಸ್ವಾಮಿಯನ್ನು ದರ್ಶಿಸಿರಿ.

★ ಆಲಯವನ್ನು ಪ್ರವೇಶಿಸುವ ಮೊದಲು ಸ್ನಾನಮಾಡಿ, ಶುಭ್ರವಾದ ಉಡುಪು ದರಿಸಿರಿ.
ಆಲಯದ ಒಳಗಡೆ ಸ್ವಾಮಿಯಲ್ಲಿ ಮನಸ್ಸನ್ನು ಕೇಂದ್ರೀಕರಿಸಿ.

★ ಆಲಯದ ಒಳಗಡೆ ಗಂಭೀರ ಮೌನವನ್ನು ಪಾಲಿಸಿರಿ ಮತ್ತು ಮನಸ್ಸಿನಲ್ಲಿ
''ಓಂ ನಮೋ ವೇಂಕಟೇಶಾಯ'' ಎಂದು ಜಪಿಸಿರಿ.

★ ತಿರುಮಲೆಯಲ್ಲಿ ಪಾಪನಾಶಿನಿಯಲ್ಲೂ, ಆಕಾಶಗಂಗೆಯಲ್ಲೂಸ್ನಾನಮಾಡಿರಿ.

★ ತಿರುಮಲೆಗೆ ಬಂದಾಗ ಪ್ರಾಚೀನಪರಂಪರೆಯನ್ನೂ ಆಚಾರವನ್ನೂಗೌರವಿಸಿ.

★ ಸಹಯಾತ್ರಿಕರಲ್ಲಿನ ಧಾರ್ಮಿಕ ಭಾವನೆಯನ್ನು ಗೌರವಿಸಿ, ಪ್ರೋತ್ಸಾಹಿಸಿ.

★ ತಮ್ಮ ಕಾಣಿಕೆಗಳನ್ನು ಹುಂಡಿಯಲ್ಲಿ ಮಾತ್ರವೇ ಸಮರ್ಪಿಸಿ.

★ ತಿರುಮಲೆಯಲ್ಲಿ ನಿಮ್ಮ ಸೇವೆ, ಹಾಗೂ ಆಲಯದ ಬಗ್ಗೆ ವಿವರಗಳಿಗಾಗಿ
ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ ಕೇಳಿ ವಿವರಗಳನ್ನು ಪಡೆಯಿರಿ.

### ಮಾಡಬಾರದವು :

★ ತಮ್ಮೊಂದಿಗೆ ಹೆಚ್ಚಿನ ಹಣ, ಆಭರಣಗಳನ್ನು ತರಬೇಡಿ.

★ ಮಾಂಸಾಹಾರವನ್ನು ಬಳಸಬೇಡಿರಿ. ಮಾದಕ ವಸ್ತು ಪೇಯಗಳನ್ನು ಬಳಸಬೇಡಿರಿ. ಧೂಮಪಾನ ಮಾಡಬೇಡಿರಿ.

★ ವಸತಿಗಾಗಿ, ಶೀಘ್ರದರ್ಶನಕ್ಕಾಗಿ ದಳ್ಳಾಳಿಗಳನ್ನು ಆಶ್ರಯಿಸಬೇಡಿರಿ.

★ ಆಲಯದ ಒಳಗೆ, ಹೊರಗೆ ಪಾದರಕ್ಷೆಗಳನ್ನು ಧರಿಸಿ ಓಡಾಡಬೇಡಿರಿ.

★ ದೇವರನ್ನು ಸೇವಿಸುವುದರ ಹೊರತು ಬೇರೆ ಯಾವ ಕಾರಣಕ್ಕೂ ತಿರುಮಲೆಗೆ ಬಾರದಿರಿ.
ಸಂಪ್ರದಾಯದಂತೆ ಆಲಯ ಪ್ರವೇಶ ನಿಷೇಧವಿದ್ದಲ್ಲಿ ಆಲಯ ಪ್ರವೇಶ ಮಾಡದಿರಿ.

★ ದೇವರ ದರ್ಶನಕ್ಕಾಗಿ ನೂಕುನುಗ್ಗಲು ಮಾಡದೆ ಸರತಿಯಸಾಲಿನಲ್ಲಿ ಸೇರಿರಿ.

★ ದೇವಾಲಯದಲ್ಲಿ ಉಗುಳುವುದೇ ಮುಂತಾದವುಗಳನ್ನು ಮಾಡದಿರಿ.

★ ಭಿಕ್ಷೆಯನ್ನು ಪ್ರೋತ್ಸಾಹಿಸದಿರಿ. ಹುಸಿ ಪ್ರಸಾದಗಳನ್ನು ಕೊಳ್ಳಬೇಡಿರಿ.

★ ತಿರುಮಲೆಯಲ್ಲಿ ಎಲ್ಲ ಹೂವುಗಳೂ ದೇವರಿಗೇ. ತಾವು ಹೂವು ಮುಡಿಯದಿರಿ.

★ ಆಲಯದೊಳಗೆ ಉಗುಳುವುದೇ ಮೊದಲಾದವುಗಳನ್ನು ಮಾಡದಿರಿ..